# ಭವ್ಯ ಭಾರತ ದರ್ಶನ

ಎಸ್. ಮುಕುಂದ ರಾವ್

1952




ವಸಂತಮಾಲಿಕೆ　　ಮಂಗಳೂರು 3

ಸಾಹಿತ್ಯಕ್ಕೆ ಸಲಹೆಗಾರರು:
ಶ್ರೀ। ಕಡೆಂಗೋಡ್ಲು ಶಂಕರ ಭಟ್ಟರು.
ಶ್ರೀ। ಸೇಡಿಯಾಪು ಕೃಷ್ಣ ಭಟ್ಟರು.

ಮಾಲಿಕೆಯ ಸಲಹೆಗಾರರು:
ಶ್ರೀ। ಎಸ್. ಮುಕುಂದ ರಾಯರು
ಶ್ರೀ। ಪಿ. ಕೆ. ನಾರಾಯಣ, ಅವರು

ಮಾಲಿಕೆಯ ಸಂಚಾಲಕರು:
ವಸಂತಪ್ರೇಮಿ ಮಂಡಲಿ,
ಬೆಸೆಂಟ್ ಬಾಲಿಕಾ ಪಾಠಶಾಲೆ. ಮಂಗಳೂರು.
ಅಧ್ಯಕ್ಷೆ– ಶ್ರೀಮತಿ ಕೆ. ರಾಧಾ ಎಲ್. ರಾವ್.
ಕಾರ್ಯದರ್ಶಿ– ಶ್ರೀಮತಿ ಎಂ. ಇಂದುಬಾಲಾ.

ಸಂಪಾದಕರು:
ಶ್ರೀನಿವಾಸ ಉಡುಪ

ಮುದ್ರಕರು:
ಉದಯ ಪ್ರಿಂಟರಿ ಎಂಡ್
ಪಬ್ಲಿಕೇಶನ್ಸ್ ಲಿಮಿಟೆಡ್,
ಮಂಗಳೂರು 3.

ಪ್ರಕಾಶಕರು:
ವಸಂತಮಾಲಿಕೆ
ವಸಂತಪ್ರೇಮಿ ಮಂಡಲಿ
ಮಂಗಳೂರು 3.

# ನಮ್ಮ ಮಾತು

ಮಾಲಿಕೆಯ ನಾಲ್ಕನೆಯ ವರ್ಷದ ಮೊದಲನೆಯ ಪುಸ್ತಕವಿದು. ಇಷ್ಟರ ತನಕ ಮಾಲಿಕೆಯು ಕಥೆ ಕಾದಂಬರಿಗಳನ್ನೇ ಮಾಲೆಯ ಕುಸುಮ ಗಳನ್ನಾಗಿ ಪ್ರಕಟಿಸಿರುವುದಾದರೂ ಭಾರತದ ಭವ್ಯತೆಯ ದರ್ಶನ ಮಾಡಿ ಸುವ ಈ ವಿಚಾರಪೂರ್ಣ ಪುಸ್ತಕವು ಕನ್ನಡಿಗರ ಮೆಚ್ಚುಗೆಗೆ ಪಾತ್ರ ವಾದೀತೆಂದು ಭಾವಿಸುತ್ತೇವೆ.

ಈ ಪುಸ್ತಕವನ್ನು ಮಾಲಿಕೆಯ ಕುಸುಮವನ್ನಾಗಿ ಪ್ರಕಟಿಸಲು ಅವಕಾಶವನ್ನು ಕಲ್ಪಿಸಿಕೊಟ್ಟ ಶ್ರೀ| ಎಸ್. ಮುಕುಂದರಾಯರಿಗೆ ನಾವು ಋಣಿಗಳಾಗಿದ್ದೇವೆ.

ಚಿತ್ರಗಳನ್ನೂ ಪಡಿಯಚ್ಚುಗಳನ್ನೂ ಒದಗಿಸಿ ಈ ಪ್ರಕಟಣೆಯನ್ನು ಅಂದವಾದ ಸಚಿತ್ರ ಪುಸ್ತಕವನ್ನಾಗಿ ಮಾಡಲು ನೆರವಾದ ಶ್ರೀ| ಶಿವರಾಮ ಕಾರಂತರು, ಪುತ್ತೂರು; ಶ್ರೀ| ಎಲ್. ಎನ್ ರಾಯರು, ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ, ಕಲ್ಲಿಕೋಟೆ ಶಾಖೆ; ಶ್ರೀ| ಮುರಲೀಧರ, ಮಂಗಳೂರು; ಶ್ರೀಮತಿ ಮನೋರಮಾ ಬಾಯಿ, ಮಂಗಳೂರು ಇವ ರಿಗೂ, ನವಭಾರತ ಪ್ರೆಸ್, ಮಂಗಳೂರು; ಯು. ಆರ್. ಶೆಣೈ ಎಂಡ್ ಸನ್ಸ್, ಪುಸ್ತಕ ವ್ಯಾಪಾರಿಗಳು ಮಂಗಳೂರು ಈ ಸಂಸ್ಥೆಗಳವರಿಗೂ ನಾವು ಕೃತಜ್ಞರಾಗಿದ್ದೇವೆ.

ಕೊನೆಯದಾಗಿ ಹಿಂದಿನಂತೆಯೇ ಇನ್ನು ಮುಂದೆಯೂ ತಮ್ಮೆಲ್ಲರ ಸಹಕಾರ ಸಹಾನುಭೂತಿಗಳನ್ನು ಬಯಸುತ್ತೇವೆ.

ಬೆಸೆಂಟ್ ಶಾಲೆ,
28—8—'52.

ಶ್ರೀನಿವಾಸ ಉಡುಪ,
ಸಂಪಾದಕ.

# ಮುನ್ನುಡಿ

ಭಾರತದಲ್ಲಿ ಯುಗಾಂತರವಾಗಿದೆ. ನೂರಿನ್ನೂರು ವರ್ಷಗಳ ಕಾಲ ಬಂಧನದಲ್ಲಿದ್ದ ಜನರ ಮನೆಗಳಲ್ಲಿ ರಾಶಿಬಿದ್ದ ಕಸವನ್ನು ಗುಡಿಸಿ, ಹಿತ್ತಿಲಲ್ಲಿ ಬೆಳೆದ ಕಾಡು ಕಡಿದು ಹೊಸಮನೆ ಕಟ್ಟಬೇಕಾದ ಕಾಲವಿದು. ನವನಿರ್ಮಾಪಕರಿಗೆ ಅಗತ್ಯವಿರುವ ಉತ್ಸಾಹ, ಶಕ್ತಿ, ತೀಕ್ಷ್ಣದೃಷ್ಟಿಗಳು ದೊರಕಬೇಕಾದರೆ ತಮ್ಮಿಂದ ಭಗೀರಥ ಯತ್ನವು ಸಾಧ್ಯವೆಂಬ ಸ್ಫೂರ್ತಿಯೂ ತಮ್ಮನ್ನೆದುರಿಸುವ ಸಮಸ್ಯೆಗಳ ಸ್ಪಷ್ಟಜ್ಞಾನವೂ ಸಿಕ್ಕಲಿಕ್ಕೆ ಭಾರತದ ಗತವೈಭವವನ್ನು ನೆನೆದು ಇಂದಿನ ಸ್ಥಿತಿಯನ್ನು ಇತರ ದೇಶಗಳೊಂದಿಗೆ ಹೋಲಿಸಿದರೆ ಮಾತ್ರ ಸಾಧ್ಯವಾದೀತು. ಮತ, ಜಾತಿ, ಪಕ್ಷ, ಭೇದವಿಲ್ಲದೆ ಕೈಗೊಂಡಿರುವ ಸಮಾಜವಿಕಾಸ ಯೋಜನೆಯೂ ದೇಶೋನ್ನತಿಯ ಹಲವಾರು ಯೋಜನೆಗಳೂ ಸಾಧ್ಯವಾಗಬೇಕಾದರೆ ಇಂದಿನ ಶಾಲಾ ಕಾಲೇಜುಗಳಲ್ಲಿರುವ ಯುವಕ ಯುವತಿಯರಲ್ಲಿ ತಕ್ಕ ಸ್ಫೂರ್ತಿ, ಜ್ಞಾನಗಳು ಬೆಳಗಲೆಂದು ಬರೆದ ಈ ಪುಸ್ತಕದಲ್ಲಿ ಸರ್ವಸಮ್ಮತವಾದ ಅಂಶಗಳನ್ನೇ ಒತ್ತಿ ಹೇಳಿ ವಿವಾದಕ್ಕಾಸ್ಪದ ಕೊಡದಂತೆ ಯತ್ನಿಸಿದೆ.

ವಾಚಕರ, ಮುಖ್ಯವಾಗಿ ತರುಣ–ತರುಣಿಯರ ದಾರಿಯಲ್ಲಿ ಈ ಪುಸ್ತಕದಿಂದ ಒಂದಿಷ್ಟು ಬೆಳಕು ಹೆಚ್ಚಿದರೆ ಕೃತಾರ್ಥನಾದೆ.

ಮೇಕ್ಸ್ ಮುಲರರ India, What It Can Teach Us ಎಂಬ ಗ್ರಂಥವನ್ನೋದಿದ ಬನ ಭಾರತದ ಮೇಲೆ ಹುಟ್ಟಿದ ಭಕ್ತಿ, ವಿಶ್ವಾಸ, ಪ್ರೀತಿಗಳು ಆರ್. ಸಿ. ದತ್ತ, ದಾಧಾಭಾಯಿ ನೌರೋಜಿ, ಗೋಖಲೆ, ತಿಲಕ, ಮಹಾತ್ಮಾ ಗಾಂಧಿಯವರ ಬರೆಹಗಳಿಂದ ಹೆಚ್ಚಾಗಿ, ಜವಾಹರಲಾಲರ Discovery of India ಗ್ರಂಥದಿಂದ ಇನ್ನೂ ಬಲವಾಗಿವೆ. ಮೂವತ್ತು ವರ್ಷಗಳ ಓದಿನ ಮತ್ತು ಸ್ವಂತ ವಿಚಾರದ ಸಾರವಾದ ಈ ಪಾಕ ಓದುಗರಿಗೆ ರುಚಿಸಲೆಂದೇ ಪ್ರಾರ್ಥನೆ.

ಮಂಗಳೂರು,
ತಾ. 28-8-52.

ಎಸ್. ಮುಕುಂದ ರಾವ್.

# ಭವ್ಯಭಾರತ ದರ್ಶನ

## ೧. ಪಥದರ್ಶನ

ಮಹತ್ಕಾರ್ಯಗಳನ್ನು ಸಾಧಿಸಿ ತಮ್ಮ ಸತ್ವಸಾಹಸಗಳ ಪರೀಕ್ಷೆ ಕೊಡುವುದೆಂದರೆ ಯುವಜನರಿಗೆ ನಿಜಕ್ಕೂ ಸಂತೋಷದ ವಿಷಯ. ಹಲ್ಲು ಮೊಳೆಯದ ಶಿಶುವಿಗೂ ಹಲ್ಲು ಕಳೆದುಕೊಂಡ ವೃದ್ಧನಿಗೂ ಮೆತ್ತನೆಯ ಆಹಾರ ರುಚಿಸುವುದಾದರೆ ಹುಡುಗರಿಗೆ ಕಬ್ಬು ಜಗಿಯುವುದೆಂದರೆ ಇಷ್ಟವಷ್ಟೆ! ಯಾವ ದೇಶದ ಪುರಾಣಗಳನ್ನೋದಿದರೂ, ಚರಿತ್ರೆಯನ್ನು ಪರಿಶೀಲಿಸಿದರೂ ಲೋಕದಲ್ಲಿ ಕಷ್ಟಕಾಲ ಬಂದಾಗ, ದೇಶದಲ್ಲಿ ದೊಡ್ಡ ದೊಡ್ಡ ಕೆಲಸಗಳು ಅಗತ್ಯವಿರುವಾಗ ವೀರರು ಬಾಳಿ ಬೆಳಗಿದುದನ್ನು ಕಾಣಬಹುದು. ಹಾಗಾದರೆ ಬೇರೆ ಸಮಯದಲ್ಲಿದ್ದ ಲಕ್ಷಾಂತರ ಜನರಲ್ಲಿ ವೀರರೇ ಹುಟ್ಟುವುದಿಲ್ಲವೇ? ಹುಟ್ಟುತ್ತಾರೆ. ಕಷ್ಟಗಳನ್ನು ಸಹಿಸಿ, ಎಡರು ತೊಡರುಗಳನ್ನೆದುರಿಸಿ, ವೈರಿಗಳನ್ನುರುಳಿಸಿ, ತಮ್ಮ ತೋಳಿನ ಬಲವನ್ನೂ ಮಿದುಳಿನ ಶಕ್ತಿಯನ್ನೂ ವರ್ಧಿಸಿ ಪ್ರಕಟಿಸುವ ಆವಶ್ಯಕತೆ ಅವರಿಗೆ ತೋರಿಬರುವುದಿಲ್ಲ. ಯುಗಪುರುಷರು ಅಪೂರ್ವವಾಗಿ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಲು ಸಿಕ್ಕುವ ಕಾರಣವು ಇದೇ.

ಭಾರತದಲ್ಲಿ ಈ ಹೊತ್ತು ವೀರರಿಗೆ, ಸಾಹಸಿಗಳಿಗೆ, ಕಷ್ಟಸಹಿಷ್ಣುಗಳಿಗೆ, ದೃಢಮನಸ್ಕರಿಗೆ, ಉದಾರಹೃದಯಿಗಳಿಗೆ ವಿಶಾಲ ಕ್ಷೇತ್ರವಿದೆ. ಶ್ರೇಷ್ಠ ಆಂಗ್ಲ ಸಾಹಿತಿಗಳಲ್ಲೊಬ್ಬನಾದ ಎಚ್. ಜಿ. ವೆಲ್ಸನು ಒಂದೆಡೆ "ಯುರೋಪಿನ, ಮುಖ್ಯವಾಗಿ ಪಶ್ಚಿಮಯುರೋಪಿನ ಮತ್ತು ಅಮೇರಿಕದ ಜನರಲ್ಲಿ ಸಂಪತ್ತು ಹೆಚ್ಚಾಗಿ ವಿಲಾಸಗಳ ಹುಡುಕಾಟ ಹೆಚ್ಚುತ್ತಿರುವುದರಿಂದ ಮಹತ್ಕಾರ್ಯ ಸಾಧನೆಯು ಇಲ್ಲಿನವರಿಂದ ಇನ್ನು ಮುಂದೆ ಆಗಲಿಕ್ಕಿಲ್ಲ. ಚೀನಾ, ಇಂಡಿಯಾ ಮೊದಲಾದ ದೇಶಗಳಲ್ಲಿ ನವೀನ ಸೃಷ್ಟಿಯೇ ಆಗಬೇಕಾದುದರಿಂದ ಅಲ್ಲಿನ ಜನರಿಗೆ ಈ ಅವಕಾಶವೂ

ಕೀರ್ತಿಯೂ ಸಿಕ್ಕುವುದೆಂದು ಊಹಿಸಬಹುದು" ಎಂದು ಹೇಳಿದ್ದಾನೆ. ಫ್ರಾನ್ಸಿನಲ್ಲಿ ಮಹಾಕ್ರಾಂತಿಯಾಗಿ ಸಮಾಜದಲ್ಲಿ ಆಮೂಲಾಗ್ರ ಸುಧಾರಣೆಗಳಾಗುವುದೆಂಬ ಕನಸು ಹೊಳೆದಾಗ ಆಂಗ್ಲಕವಿ ವರ್ಡ್ಸ್‌ವರ್ತನು "ಅಂದು ಬಾಳಿದವರೇ ಸುಖಿಗಳು, ತರುಣರಾಗಿದ್ದವರು ಸ್ವರ್ಗ ಜೀವಿಗಳು" ಎಂದು ಉದ್ಗಾರವೆತ್ತಿದ್ದನು. ಫ್ರಾನ್ಸಿನ ಕ್ರಾಂತಿಯಿಂದ ಆಶಿಸಿದ ನವೀನ ಯುಗವು ಉದಯವಾಗಲಿಲ್ಲ, ಆದರೆ ಹೊಸತಾಗಿ ನಿರ್ಮಾಣ ಮಾಡುವುದೆಂದರೆ ಎಷ್ಟು ಹೆಮ್ಮೆಯ ಸಂಗತಿ ಎಂಬುದಕ್ಕೆ ಇದೂ ಒಂದು ನಿದರ್ಶನ.

ಭಾರತವು ಸ್ವತಂತ್ರವಾಗಿದೆ. ಅನೇಕ ತಲೆಮಾರುಗಳಿಂದ ಪರದಾಸ್ಯದಲ್ಲಿದ್ದ ದೇಶವು ಅರ್ಧಶತಮಾನಕಾಲ ದುಡಿದು, ಮಡಿದ ವೀರರ ತ್ಯಾಗದ ಫಲದಿಂದ ಸ್ವತಂತ್ರವಾಗಿದೆ. ನಮ್ಮದು ಈಗ ಸ್ವತಂತ್ರ ದೇಶ. ನಾವಿನ್ನು ಉಚ್ಚ ಅಧಿಕಾರಗಳನ್ನು ಕೇಳಬಹುದು, ಶಾಸನ ಸಭೆಗಳ ಸದಸ್ಯರಾಗಬಹುದು, ಮಂತ್ರಿಗಳಾಗಬಹುದು, ರಾಷ್ಟ್ರಾಧ್ಯಕ್ಷರಾಗಬಹುದು, ಎಂದುಕೊಂಡೇ ಕುಳಿತರೂ, ಅವನ್ನೇ ಹುಡುಕಿಕೊಂಡು ಹೋದರೂ ದೇಶಕಲ್ಯಾಣವಾಗದು. ಹತ್ತು ಹದಿನೈದು ಲಕ್ಷ ಪ್ರಜೆಗಳಿರುವ ಜಿಲ್ಲೆಯಲ್ಲಿ ಹತ್ತು ಹದಿನೈದು ಜಿಲ್ಲಾ ಅಧಿಕಾರಿಗಳಿರಬಹುದು. ಹತ್ತು ಹದಿನೈದು ಮಂದಿ ಶಾಸನ ಸಭಾಸದಸ್ಯರಾಗಬಹುದು. ಹಾಗೆಯೇ ಮಿಲಿಯಕ್ಕೊಬ್ಬರಂತೆ ರಾಜ್ಯಗಳಲ್ಲಿ ಅಧಿಕಾರ ನಡೆಸಬಹುದು, ಕೋಟಿಗೊಬ್ಬರಂತೆ ಸಮಗ್ರಭಾರತದ ನಾಯಕರಾಗಬಹುದು. ಉಳಿದವರು ನಾಯಕತನಕ್ಕೆ ಕಾದುಕೊಂಡಿರದೆ ದೇಶದ ಉನ್ನತಿಗಾಗಿ ನೂರಾರು ವಿಧದ ಕೆಲಸಗಳಲ್ಲಿ ಮಗ್ನರಾಗಬೇಕು.

ದೇಶೋನ್ನತಿಯ ಕೆಲಸದ–ಇಷ್ಟರೊಳಗೇ ಮಾಡಿ ಮುಗಿಸಬೇಕಾದ ಕೆಲಸದ–ಪರ್ವತವೇ ಬಿದ್ದಿದೆ. ಕೆಲವೇ ವಿಷಯಗಳನ್ನು ಪ್ರಸ್ತಾವಿಸೋಣ. ಜಗತ್ತಿನ ಕೃಷಿಪ್ರಧಾನ ದೇಶಗಳಲ್ಲಿ ಭಾರತವು ಒಂದು ಎಂದು ನಮ್ಮ ಭೂಗೋಳ, ಅರ್ಥಶಾಸ್ತ್ರಗಳಲ್ಲಿ ಓದಿದ್ದೇವಲ್ಲವೆ? ಕೃಷಿಕರಿಗೆ ದುರ್ಭಿಕ್ಷವಿರಬಾರದೆಂಬುದು ಒಪ್ಪಬೇಕಾದ ಸಂಗತಿ. ಆದರೆ ನಮ್ಮಲ್ಲಿ ಕಳೆದ ಎಂಟು ಹತ್ತು ವರ್ಷಗಳಿಂದ ಎಲ್ಲರೂ ಕಣ್ಣೆರೆಯುವಂತಾದ ಅವಸ್ಥೆ ಏನು? ಕೆಲವೆಡೆಗಳಲ್ಲಿ ಕ್ಷಾಮ, ಇನ್ನೂ ಹೆಚು ಸ್ಥಳಗಳಲ್ಲಿ

ದುರ್ಭಿಕ್ಷ, ದೇಶದಲ್ಲೆಲ್ಲ ಹಸುಗೆ! ಇವನ್ನು ಇಷ್ಟು ವರ್ಷ ಅನುಭವಿಸಿಯೂ ನಮ್ಮ ಸ್ಥಿತಿಯು ಸುಧಾರಿಸಿಲ್ಲವಲ್ಲ! 1951–52ರ ಆಯಾತ ನಿರ್ಯಾತಗಳನ್ನು ನೋಡಿದರೆ ಪರದೇಶಗಳಿಂದ 230 ಕೋಟಿ ರೂಪಾಯಿ ಬೆಲೆಯ ಆಹಾರ ಧಾನ್ಯ ಹಿಟ್ಟುಗಳನ್ನು ನಾವು ತರಿಸಿದ್ದೇವೆಂದು ಸ್ಪಷ್ಟವಾಗುತ್ತದೆ. ಹಿಂದೆ 60 ಕೋಟಿ ರೂಪಾಯಿಯ ವಸ್ತ್ರವನ್ನು ಪರದೇಶಗಳಿಂದ ತರಿಸುತ್ತಿದ್ದಾಗ ದೇಶದ ಸಂಪತ್ತು ಸೂರೆಯಾಗುತ್ತಿದೆ, ಜಾಗ್ರತೆ ಎಂದು ನೌರೋಜಿ, ರಾನಡೆ, ಗೋಖಲೆ, ಗಾಂಧಿಯವರು ಜನರನ್ನು ಎಚ್ಚರಿಸಿದ್ದರು. ಅಕ್ಕಿ, ಗೋಧಿ, ಜೋಳ, ಹಾಲು, ತೆಂಗಿನ ಎಣ್ಣೆ— ಇವನ್ನು ಸಹ ಪರದೇಶಗಳಿಂದ ತರಿಸಬೇಕೆಂದಾದರೆ ಅವರು ಏನು ಹೇಳುತ್ತಿದ್ದರು? ಹೊರಗಿನಿಂದ ಆಹಾರ ತರಿಸುವ ಅಗತ್ಯವಿದ್ದರೂ ಚಿಂತೆಯಿಲ್ಲ; ನಾವು ಕೈಗಾರಿಕೆಗಳಲ್ಲಿ ಮಗ್ನರಾಗಿ ಸಿದ್ಧ ವಸ್ತುಗಳನ್ನು ಹಡಗುಗಳಲ್ಲಿ ತುಂಬಿಸಿ ಹೊರಗೆ ಕಳುಹಿಸುವುದಿದ್ದರೆ, ಹೌದು. ಇಂಗ್ಲಾಂಡು ತನ್ನ ಯಂತ್ರಗಳನ್ನೂ ಇತರ ಸಿದ್ಧ ವಸ್ತುಗಳನ್ನೂ ಜಗತ್ತಿನ ಮೂಲೆ ಮೂಲೆಗಳಿಗೆ ಕಳುಹಿಸಿ, ಬೇಕಾದ ಆಹಾರಧಾನ್ಯಗಳ ಅರೆವಾಸಿಯಷ್ಟನ್ನು ಆಯಾತ ಮಾಡುತ್ತದೆ; ಅದು ಸಹ ಸರಿಯಲ್ಲವೆಂದೂ ಆಹಾರದ ಮಟ್ಟಿಗೆ ತಾವು ಸ್ವಸಂಪೂರ್ಣವಾಗಿರಬೇಕೆಂದೂ ಅಲ್ಲಿನವರು ಯತ್ನಿಸುತ್ತಿದ್ದಾರೆ. ಹಾಗಿರುವಾಗ ನಮ್ಮ ಸ್ಥಿತಿ ಎಷ್ಟು ಗಂಡಾಂತರದ್ದೆಂದು ಸ್ಪಷ್ಟವಾಗುವುದು.

ದಾರಿದ್ರ್ಯವೆಂದರೆ ಸಕಲವಿಧದ ದುಃಖಗಳಿಗೆ ತವರು. ನಮ್ಮಲ್ಲಿ ದಿನಂಪ್ರತಿ ಹುಟ್ಟುವ ಮಕ್ಕಳಲ್ಲಿ ಹತ್ತಕ್ಕೊಂದರಂತೆ ಒಂದು ವರ್ಷದಲ್ಲೇ ಮಣ್ಣುಪಾಲಾಗುವುದೆಂದರೆ ಎಷ್ಟು ಮಂದಿ ತಾಯಂದಿರು ಕಣ್ಣೀರು ಸುರಿಸುತ್ತಿದ್ದಾರೆಂದು ಊಹಿಸಬಹುದು; ನಮ್ಮ ಜನರ ಆಯುಷ್ಯದ ಅವಧಿ ಸರಾಸರಿ ಬರಿಯ ಇಪ್ಪತ್ತೈದು ವರ್ಷಗಳೂ ಇಲ್ಲವಂತೆ. ವಿದ್ಯೆಯಲ್ಲಂತೂ ತೀರ ಹಿಂದೆ ಉಳಿದಿದ್ದೇವೆ. ಜೀವನದ ಅಡಿಗಟ್ಟಾಗಿರುವ ಅನ್ನ, ಆರೋಗ್ಯ, ನೈರ್ಮಲ್ಯ, ವಿದ್ಯೆ–ಇವುಗಳೇ ಇಲ್ಲವೆಂದಾದ ಮೇಲೆ ಇತರ ವಿಷಯಗಳಲ್ಲಿ ನಾವು ಎಷ್ಟು ಶತಮಾನ ಹಿಂದೆ ಬಿದ್ದಿದ್ದೇವೆಂದು ತಿಳಿಯಬಹುದು.

ನಮ್ಮೆದುರು ಇರುವ ಪ್ರಶ್ನೆಯನ್ನು ಬಗೆಹರಿಸಲಿಕ್ಕೆ ಬರೀ ಆರ್ಥಿಕ, ರಾಜಕೀಯ ಜ್ಞಾನವಿದ್ದರೆ ಸಾಲದು; ಅದು ಅಗತ್ಯವಾದರೂ ಅದು ಮಾತ್ರ ಸಾಲದು. ದೇಶದ ಭವಿಷ್ಯದ ಕುರಿತು ಭವ್ಯದರ್ಶನವನ್ನು ಕಾಣ

ಬೇಕು; ಅದೇ ಚಿತ್ರಭಿತ್ತಿಯಲ್ಲಿ ಸದಾ ಹೊಳೆಯುತ್ತಿರಬೇಕು. ಆಗ ಮಾತ್ರ ಪ್ರಯತ್ನಕ್ಕೆ ಮನಸ್ಸು ಬರುವುದು, ಭಗೀರಥ ಯತ್ನಕ್ಕೆ ಬೇಕಾದ ಶಕ್ತಿಯೂ ಬರುವುದು.

ಭವ್ಯದರ್ಶನವನ್ನು ಕವಿಯಂತೆ ಕನಸು ಕಂಡರೂ ಸಾಲದು. ನಮ್ಮ ಜನರ ಇತಿಹಾಸದಿಂದ ನಾವು ತಿಳಿಯಬೇಕಾದ ಮುಖ್ಯಾಂಶಗಳನ್ನು ತಿಳಿದುಕೊಂಡು, ನಮ್ಮೆದುರು ಇರುವ ಪ್ರಶ್ನೆಗಳ ಜಟಿಲತೆ, ಅವುಗಳ ನಿಜವಾದ ಸ್ವರೂಪಗಳನ್ನು ಅರಿತುಕೊಳ್ಳಬೇಕು. ವಾಸ್ತವಿಕತೆಯನ್ನು ಮರೆತು, ನಮ್ಮ ಹಿನ್ನೋಟವನ್ನು ಅರಿಯದೆ ಅಮೇರಿಕದಲ್ಲಿ ಹಾಗಿದೆ, ಇಂಗ್ಲಾಂಡಿನಲ್ಲಿ ಹೀಗಿದೆ ಎಂದರೆ ಬರೇ ವಾಗಾಡಂಬರದ ಭಾಷಣಗಳಿಗೆ ಅವಕಾಶವಾಗುವುದಲ್ಲದೆ ಕಾರ್ಯವೇನೂ ಫಲಕಾರಿಯಾಗಲಾರದು.

ಭಾರತವು ಇಂದು ನಿನ್ನೆಯ ದೇಶವಲ್ಲ, ಇಲ್ಲಿನ ಜನರೂ ನಿನ್ನೆ ಮೊನ್ನೆ ಬಂದವರಲ್ಲ; ಜಗತ್ತಿನ ಅತಿ ಪ್ರಾಚೀನ ಕಾಲದಲ್ಲಿ ಸಂಸ್ಕೃತಿ, ನಾಗರಿಕತೆಗಳು ಆರಂಭದಲ್ಲಿ ಮೊಳೆದು ಚಿಗುರಿದ ದೇಶಗಳೆಂದರೆ, ಚೀನಾ, ಭಾರತ, ಮಧ್ಯಪೂರ್ವದ ಇರಾಕ್, ಇಜಿಪ್ತ್, ಪೆಲೆಸ್ತೀನು, ಗ್ರೀಸು. ಇವುಗಳಲ್ಲಿ ಚೀನಾ ಮತ್ತು ಭಾರತ ಎರಡನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಹಿಂದಿನ ಜನದ ಸಂತತಿಯೇ ಇಂದಿಲ್ಲವೆಂದರೆ ತಪ್ಪಾಗದು; ಹಿಂದಿಗೂ ಇಂದಿಗೂ ಏನೂ ಸಂಬಂಧವಿಲ್ಲದಂತಾಗಿದೆ ಆ ದೇಶಗಳಲ್ಲಿ. ಇರಾಕು, ಇಜಿಪ್ತುಗಳಲ್ಲಂತೂ ಪ್ರಾಚೀನ ಸಂಸ್ಕೃತಿಯೆಂದರೆ ಬರೇ ಗೋರಿಗಳಲ್ಲಿಯೂ ಭಗ್ನ ಮಂದಿರಗಳಲ್ಲಿಯೂ ಕುರುಹು ತೋರುತ್ತಿರುವ ಮರೆತುಹೋದ ಕನಸಾಗಿದೆ; ಇಂದಿನ ಜನರಿಗೂ ಅದಕ್ಕೂ ದೂರದ ನೆಂಟಸ್ತಿಕೆಯೂ ಉಳಿದಿಲ್ಲ. ಭಾರತದಲ್ಲಿ ಮಾತ್ರ 5000 ವರ್ಷಗಳಿಂದ ಹರಿದ ಜನಜೀವನದ ನದಿ ಇಂದಿಗೂ ಹರಿಯುತ್ತಿದೆ. ಅದರ ಹರಿದಾಟದ ನಡೆ ಬೇರೆಯಾಗಿರಬಹುದು, ಆಳ ಹೆಚ್ಚುಕಡಿಮೆಯಾಗಿರಬಹುದು, ಬಣ್ಣ ಬದಲಾಗಿರಲೂಬಹುದು—ಆದರೆ ಅದರ ಉಗಮ ಬತ್ತಿಹೋಗಿಲ್ಲ, ರಭಸ ಕಡಿಮೆಯಾಗಿಲ್ಲ. ಭಾರತವು ಅಕ್ಷರಶಃ ಚಿರಂತನ ಭಾರತ. ಅದರ ಭವ್ಯದರ್ಶನವನ್ನು ಕಂಡುಕೊಂಡರೆ ಮಾತ್ರ ಭಾರತದ ಸೇವಕರಾಗುವ ದೀಕ್ಷಾಬದ್ಧರಾಗಬಹುದು.

# ೨. ಜನದರ್ಶನ

ಭಾರತದ ಜನರನ್ನು ಕಂಡಾಕ್ಷಣ ಇವರು ಒಂದು ಜನಾಂಗವಲ್ಲ, ವಿವಿಧ ಜನಸಮೂಹ ಎಂದು ಪಾಶ್ಚಾತ್ಯರು ಹೇಳುವುದು ರೂಢಿಯಾಗಿತ್ತು. ಈಗ ಸ್ವತಂತ್ರವಾದ ಭಾರತದ ಪ್ರಜೆಗಳ ಕುರಿತು ಬಹಿರಂಗವಾಗಿ ಹೇಳದಿದ್ದರೂ ಅವರ ಮನಸ್ಸಿನಲ್ಲಿ ಹಿಂದಿನ ಅಭಿಪ್ರಾಯವೇ ಇರಲೂಬಹುದು. ಇಂಗ್ಲಾಂಡಿನ ಅರಸು ಭಾರತದ ಚಕ್ರವರ್ತಿಯೆಂದು ಗಣಿಸಲ್ಪಡುತ್ತಿದ್ದಾಗ ಪ್ರತಿವರ್ಷ ಅವನ ಜನ್ಮದಿನದ ಸಂದೇಶದಲ್ಲಿ ನಮ್ಮನ್ನು ಭಾರತದ ಜನಗಳು (peoples) ಎಂದು ಸಂಬೋಧಿಸುತ್ತಿದ್ದನಲ್ಲದೆ ಭಾರತದ ಜನರು (people) ಎಂಬ ಪದವನ್ನು ಉಪಯೋಗಿಸುತ್ತಿರಲಿಲ್ಲ. ಅಂದರೆ ಭಾರತದ ಜನರೆಂದರೆ ಒಂದೇ ಕುಲದವರಲ್ಲ, ಭಿನ್ನಭಿನ್ನ ಜನರ ಸಂದಣಿಯೆಂದೇ ಹೊರಗಿನವರ ಸ್ಥಿರವಾದ ತೀರ್ಮಾನವಾಗಿತ್ತು.

ಮೇಲಿಂದ ಮೇಲೆ ನೋಡಿದರೆ ಅವರ ಅಭಿಪ್ರಾಯ ತಪ್ಪಲ್ಲ, ಸರಿಯೆಂದೇ ಕಂಡುಬರಲು ಕಾರಣಗಳಿವೆ. ಕಾಶ್ಮೀರ, ರಾಜಸ್ಥಾನ, ಮಹಾರಾಷ್ಟ್ರ, ಬಂಗಾಳ ಮತ್ತು ತಮಿಳುನಾಡಿನ ಕೆಲವು ಜನರನ್ನು ಸಾಲಾಗಿ ನಿಲ್ಲಿಸಿದೆವೆನ್ನುವ; ಎತ್ತರದಲ್ಲಿ, ಬಣ್ಣದಲ್ಲಿ, ಮುಖಮುದ್ರೆಯಲ್ಲಿ, ಹಣೆಯಗಲದಲ್ಲಿ, ಮೂಗಿನ ಬಾಗಿನಲ್ಲಿ ಎಷ್ಟು ಅಂತರ! ಇವರೆಲ್ಲ ಒಂದೇ ಎಂದರೆ ಯಾರು ತಾನೇ ಒಪ್ಪಬಹುದು? ಭಾಷೆಗಳನ್ನೆಣಿಸಿ ನೋಡಿದರೆ ತಮ್ಮದೇ ಸಾಹಿತ್ಯವಿರುವವುಗಳು ಕಾಶ್ಮೀರಿ, ಪಂಜಾಬಿ, ಹಿಂದಿ, ಬಂಗಾಳಿ, ಆಸಾಮಿ, ಗುಜರಾಥಿ, ಮರಾಠಿ, ಒರಿಯಾ, ತೆಲುಗು, ಕನ್ನಡ, ತಮಿಳು, ಮಲೆಯಾಳಿಗಳೆಂದು ಹನ್ನೆರಡಿವೆ. ಇವುಗಳಲ್ಲಿ ಉರ್ದು, ಮಾರ್ವಾಡಿ, ರಾಜಸ್ಥಾನಿ ಮೊದಲಾದ ಆಂತರಿಕ ಭೇದಗಳು; ಇನ್ನೂರಕ್ಕಿಂತ ಹೆಚ್ಚು ಆಡುಮಾತುಗಳು! ಆಹಾರವಿಹಾರಗಳಲ್ಲಿಯೂ ಆಚಾರವಿಚಾರಗಳಲ್ಲಿಯೂ ಒಂದು ಪ್ರದೇಶಕ್ಕೂ ಇನ್ನೊಂದಕ್ಕೂ ಭೇದವಿದೆ. ಹಾಗಾಗಿ ಮೇಲಿಂದ ಮೇಲೆ ನೋಡಿದರೆ ನಾವೆಲ್ಲ ಒಂದೇ ಎಂದು ತೋರಿಬರುವುದಿಲ್ಲ.

ಭಿನ್ನತೆಗಳನ್ನು ವಿವರಿಸುವಾಗ ಮತಭೇದಗಳನ್ನು ಸೇರಿಸದಿರಲು ಕಾರಣವಿದೆ. ಮತಭೇದದಿಂದ ಜನಭೇದವಾಯಿತೆಂದರೆ ತಪ್ಪಾಗುವುದು. ಇಂಗ್ಲಾಂಡಿನಲ್ಲಿ ಪ್ರೊಟೆಸ್ಟೆಂಟರೂ ಇದ್ದಾರೆ, ಕೆಥೋಲಿಕರೂ ಇದ್ದಾರೆ. ಹಾಗೆಯೇ ಅಮೇರಿಕಾ, ಫ್ರಾನ್ಸು, ಜರ್ಮನಿಗಳಲ್ಲೂ ಮತಭೇದಗಳಿವೆ; ಚೀನಾ, ಬರ್ಮಾ, ಸಿಲೋನುಗಳಲ್ಲೂ ಇವೆ. ನಮ್ಮಲ್ಲೇ ತುಳು ಮಾತಾಡುವ ಪ್ರೊಟೆಸ್ಟೆಂಟರು, ಕೊಂಕಣಿ ಮಾತಾಡುವ ಕೆಥೋಲಿಕರು, ಮಳಯಾಳಿ ಮಾತಾಡುವ ಮಾಪಿಳ್ಳೆಯರು—ಇವರೆಲ್ಲ ಮತಭೇದದಿಂದಾಗಿ ತಮ್ಮ ಸುತ್ತಲಿನ ಜನದಿಂದ ಭಿನ್ನರಾಗಿದ್ದಾರೆಂದರೆ ಒಪ್ಪುವ ತರ್ಕವಲ್ಲ. ಮತಭೇದದಿಂದ ಜನರಲ್ಲಿ ಅನೈಕ್ಯವುಂಟಾಗಲು ಕಾರಣವಾಗುವುದೇ ಎಂಬ ಪ್ರಶ್ನೆ ಬೇರೆ; ಅದರಿಂದಾಗಿ ಬೇರೆ ಜನಾಂಗ ಹುಟ್ಟುವುದಿಲ್ಲವೆಂದು ತಿಳಿದರೆ ಸಾಕು.

ತೋರಿಕೆಗೆ ನೂರಾರೆಂದು ಕಾಣುವ ಭಾರತದ ಜನ ಅಂತರ್ಯದಲ್ಲಿ ಒಂದೇ ಜನ, ಒಂದೇ ತನು, ಒಂದೇ ಮನವೆಂದು ತಿಳಿಯಬೇಕಾದರೆ ಭಾರತದ ಚರಿತ್ರೆಯನ್ನು ಮನನಮಾಡಬೇಕು.

ಅನೇಕ ಸಾವಿರ ವರ್ಷಗಳ ಹಿಂದೆಯೇ—5000ಕ್ಕಿಂತ ಹೆಚ್ಚು ಎಂದು ಬಲ್ಲವರು ಹೇಳುತ್ತಾರೆ—ಈಗ ಪಾಕಿಸ್ತಾನಕ್ಕೆ ಸೇರಿದ ಸಿಂಧೂ ನದಿಯ ದಂಡೆಯಲ್ಲಿ ಸುಸಂಸ್ಕೃತ ಜನರು ನೆಲೆಮಾಡಿದ್ದರು. ಮೊಹೆಂಜೊಡರೊ, ಹರಾಪಾ ಮೊದಲಾದ ಸ್ಥಳಗಳಲ್ಲಿ ನೆಲವನ್ನು ಅಗೆದು ಮಾಡಿದ ಶೋಧಗಳಿಂದ ಆ ಕಾಲದ ಜನರ ಸ್ಥಿತಿಗತಿಗಳ ಕುರಿತು ಅನೇಕ ವಿಷಯಗಳನ್ನು ತಿಳಿಯಬಹುದಾಗಿದೆ. ಅವರ ಕುರಿತು ಇನ್ನೂ ಅನೇಕ ಸಂಗತಿಗಳನ್ನು ಕಂಡುಹಿಡಿಯಲಿಕ್ಕೆ ಉಳಿದಿವೆಯಾದರೂ ಇಷ್ಟರ ತನಕ ತಿಳಿದ ಅಂಶಗಳಿಂದ ಆಗಿನ ಜನರ ಆಕಾರ, ನಿಲುಗಟ್ಟುಗಳನ್ನು ಊಹಿಸುವುದು ಸಾಧ್ಯವಾಗಿದೆ. ಸಿಂಧೂತೀರದ ಅಂದಿನ ಜನರಿಗೂ ಭಾರತದ ದಕ್ಷಿಣ ವಿಭಾಗದಲ್ಲಿ ಹೆಚ್ಚಾಗಿ ಕಂಡುಬರುವ ನಮ್ಮಂಥ ಜನರಿಗೂ ಹೆಚ್ಚಿನ ಹೋಲಿಕೆಯಿದೆ. ಅವರನ್ನೂ ನಮ್ಮನ್ನೂ ಒಂದೇ ಹೆಸರಿಂದ ಕರೆಯಬಹುದಾದರೆ ದ್ರಾವಿಡರೆಂದರೆ ತಪ್ಪಾಗದು. ಆರಂಭದಲ್ಲಿ ಅವರು ನದಿದಡಗಳಲ್ಲೇ ಅಲೆದಾಡಿ ಬೇಟೆಯಾಡಿಯೋ ದನಕರುಗಳನ್ನು ಸಾಕಿ

ಕೊಂಡೋ ಇದ್ದಿರಬೇಕೆಂದೂ ಅನಂತರ ನದೀತೀರಗಳಲ್ಲೇ ಅಲ್ಲಲ್ಲಿ ನೆಲಸಿ ಮನೆಗಟ್ಟಿ, ಪಟ್ಟಣಗಳನ್ನು ನಿರ್ಮಿಸಿ, ಕೋಟೆಕೊತ್ತಲಗಳನ್ನು ಭದ್ರತೆಗಾಗಿ ರಚಿಸಿ, ಕೈಕಸಬು, ವ್ಯಾಪಾರಗಳಲ್ಲಿ ನಿರತರಾಗಿದ್ದಿರಬೇಕೆಂದೂ ತಜ್ಞರು ಅಭಿಪ್ರಾಯಪಡುತ್ತಾರೆ. ಉತ್ತರ ಭಾರತದ ಎರಡು ಮೂರು ಕಡೆಗಳಲ್ಲಿ ಮಾತ್ರ ಅವರ ಪಟ್ಟಣಗಳ ಅವಶೇಷಗಳನ್ನು ಕಂಡು ಹಿಡಿದಿದ್ದಾರಾದರೂ ಗಂಗಾನದಿಯ ಬಯಲಿನ ಅನೇಕ ಸ್ಥಳಗಳು ಅವರ ನೆಲೆವೀಡುಗಳಾಗಿದ್ದಿರಬೇಕೆಂದು ತೀರ್ಮಾನಿಸಲು ಕಾರಣಗಳಿವೆ.

ಮೊಹೆಂಜೊಡರೋವಿನ ಅವಶೇಷಗಳಲ್ಲಿ ಕಾಣಸಿಕ್ಕುವ ವಸ್ತುಗಳು ಅಸಂಖ್ಯಾತವಿವೆ. ಸುಟ್ಟ ಇಟ್ಟಿಗೆಗಳ ದಪ್ಪವಾದ ಗೋಡೆಗಳಿಂದ ಆವರಿಸಲ್ಪಟ್ಟ ಪಟ್ಟಣ, ಒಳಗೆ ಕ್ರಮದಲ್ಲಿ ಹರಡಿರುವ ಕೇರಿಗಳು. ಇಕ್ಕಡೆಗಳಲ್ಲಿಯೂ ಅಂಗಡಿಗಳು ಮತ್ತು ಮನೆಗಳು, ಮನೆಗಳಲ್ಲಿ ಅಡುಗೆ ಮನೆ ಬೇರೆ, ವಾಸದ ಕೋಣೆ ಬೇರೆ, ಬಚ್ಚಲು ಮನೆ ಬೇರೆ, ಅಲ್ಲದೆ ಸಾರ್ವಜನಿಕ ಸ್ನಾನಗೃಹ, ಕೊಳಕು ನೀರು ಹರಿದುಹೋಗಲು ಎಲ್ಲೆಲ್ಲಿಯೂ ಚರಂಡಿಗಳ ವ್ಯವಸ್ಥೆ—ಇವುಗಳೆಲ್ಲವನ್ನೂ ಕಾಣಬಹುದು.

ಮನೆಗಳಲ್ಲೂ ಅಂಗಡಿಗಳಲ್ಲೂ ಆಗಿನ ಕಾಲದ ಆಭರಣಗಳ ಅವಶೇಷಗಳೂ ಇವೆ. ಅಲ್ಲದೆ ಮಕ್ಕಳ ಆಟದಗೊಂಬೆಗಳೂ ಪೂಜೆಯ ವಿಗ್ರಹಗಳೂ ಬರೆಹವಿರುವ ಮುದ್ರೆಗಳೂ ದೊರಕಿವೆ. ಆದರೆ ಮುದ್ರೆಗಳ ಚಿತ್ರಲಿಪಿಯನ್ನು ಓದಿ ಅರ್ಥ ಮಾಡಲು ಮಾತ್ರ ಇನ್ನೂ ಸಾಧ್ಯವಾಗಿಲ್ಲ.

ಇದನ್ನೆಲ್ಲ ನೋಡಿದರೆ ಅವರ ಸಮಾಜದಲ್ಲಿ ಉತ್ತಮ ವ್ಯವಸ್ಥೆ ಇದ್ದಿರಬೇಕು, ಕ್ರಮವಾದ ಆಡಳಿತೆ ಇದ್ದಿರಬೇಕು, ಜನರು ಕೃಷಿ, ಕೈಗಾರಿಕೆಗಳಿಂದ ವಿಶೇಷ ಪ್ರಯೋಜನಪಡೆದು ಸುಖಿಗಳಾಗಿದ್ದಿರಬೇಕು ಎಂದು ನಿರ್ಣಯ ಮಾಡುವುದು ತಪ್ಪಲ್ಲ.

ಮೊಹೆಂಜೊಡರೊವಿನಲ್ಲಿ ಕಾಣಬರುವ ಸುಸಂಸ್ಕೃತ ಜನರ ಕಾಲಕ್ಕಿಂತ ಹಿಂದಿನವರಾದ, ಇಂದಿಗೂ ಅಲ್ಲಲ್ಲಿ ಗುಡ್ಡಗಾಡುಗಳ ಸೆರಗಿನಲ್ಲಿ ವಾಸಿಸಿಕೊಂಡಿರುವ ಜನಸಮುದಾಯಗಳು ಬೇರೆಯೇ ಇವೆ. ಆಸಾಮಿನ ನಾಗರು, ಬಿಹಾರ ಬಂಗಾಳಗಳ ಸಂತಾಲರು, ಮಧ್ಯಪ್ರದೇಶದ

ಗೋಂಡರು, ಗುಜರಾತು ರಾಜಸ್ಥಾನಗಳ ಭಿಲ್ಲರು, ನೀಲಗಿರಿಯ ತೊದವರು, ಪಶ್ಚಿಮಘಟ್ಟಗಳ ಮಲೆಕುಡಿಯರು ಪಣಿಯನರು— ಹೀಗೆ ನೂರಕ್ಕೂ ಮಿಕ್ಕಿರುವ ಕೂಡುಕುಟುಂಬಗಳವರನ್ನೆಲ್ಲ ಒಟ್ಟಿಗೆ ಆದಿವಾಸಿಗಳೆಂದೂ ಆದಿಮ ಜಾತಿಯೆಂದೂ ಭೂಮಿಜನರೆಂದೂ ಕರೆಯುತ್ತಾರೆ. ಅವರಲ್ಲಿ ಪ್ರತಿಯೊಂದು ಕೂಡಿನಲ್ಲಿ ತಮ್ಮದೇ ಆದ ವಿಶಿಷ್ಟ ಭಾಷೆ, ಆಚಾರ, ಸಂಪ್ರದಾಯಗಳಿವೆ; ಎಲ್ಲರಲ್ಲೂ ಸರ್ವಸಾಧಾರಣವಾಗಿ ತೋರಿ ಬರುವ ಕೆಲವು ಆಚಾರಗಳೂ ಇವೆ. ದೆವ್ವಗಳ ಪೂಜೆಗಳ ಕಾಲದಲ್ಲೂ ವರ್ಷದಲ್ಲಿ ಎರಡು ಮೂರು ಮುಖ್ಯ ಋತು ಭೇದಗಳ ಸಮಯದಲ್ಲೂ ಸ್ತ್ರೀ ಪುರುಷರ ಸಾಮೂಹಿಕ ನರ್ತನವನ್ನು ಆದಿವಾಸಿಗಳು ಈಗಲೂ ಏರ್ಪಡಿಸುತ್ತಾರೆ. ಬಾಲ್ಯಪ್ರಾಯವನ್ನು ದಾಟಿದ ಯುವಕರೆಲ್ಲ ಒಟ್ಟಿಗೆ ಒಂದು ಮನೆಯಲ್ಲೂ (ಗೊಟುಲ್) ಯುವತಿಯರೆಲ್ಲ ಇನ್ನೊಂದರಲ್ಲೂ ವಾಸಿಸಬೇಕು; ಅಲ್ಲಿ ಬಲ್ಲವರಿಂದ ತಮ್ಮ ಕಟ್ಟುಕಟ್ಟಳೆಗಳನ್ನು ಕಲಿತು ಸಾಹಸದ ಕಾರ್ಯಗಳನ್ನು ಮಾಡಿ ತೋರಿಸಿ ವಯಸ್ಕರೆಂದು ಗಣಿಸಲ್ಪಡಬೇಕು. ನಿಷ್ಕಪಟಿಗಳೂ ನಿಸರ್ಗದೊಡನಾಡಿಗಳೂ ಆಗಿರುವ ಈ ಆದಿವಾಸಿಗಳು ಫಕ್ಕನೆ ಪೇಟೆಪಟ್ಟಣಗಳ ಥಳಕಿನ ಬಲೆಯಲ್ಲಿ ಬೀಳದಂತೆ ಮಾಡಿ ನಿಧಾನವಾಗಿ ಸುಸಂಸ್ಕೃತರನ್ನಾಗಿ ಮಾಡುವ ಕೆಲಸವು ಅಲ್ಪವೂ ಅಲ್ಲ ಸುಲಭದ್ದೂ ಅಲ್ಲ.

ದ್ರಾವಿಡರ ಅನಂತರ ಭಾರತದಲ್ಲಿ ಪ್ರವೇಶಮಾಡಿದ ಜನರೆಂದರೆ ಆರ್ಯರು. ಆರ್ಯರ ಮೂಲನಿವಾಸವು ಭಾರತವೇ ಎಂದು ಕೆಲವರೂ ಧ್ರುವವಲಯದಲ್ಲಿದ್ದವರೆಂದು ಇನ್ನು ಕೆಲವರೂ ಪ್ರತಿಪಾದಿಸಿದರೂ ಬಹುಮಂದಿ ವಿದ್ವಾಂಸರು ಮಧ್ಯ ಆಸ್ಯದಿಂದ ಹೊರಟ ಆರ್ಯಕುಲದ ಪ್ರವಾಹಗಳು ಪೂರ್ವಾಭಿಮುಖವಾಗಿ ಇರಾನು (ಪರ್ಶಿಯಾ) ಭಾರತಗಳಿಗೂ ಪಶ್ಚಿಮಾಭಿಮುಖವಾಗಿ ಯುರೋಪಿಗೂ ಹರಿದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಭಾರತದ ಸಂಸ್ಕೃತ ಭಾಷೆಯಲ್ಲೂ ಯುರೋಪಿನ ಗ್ರೀಕು, ಲೆಟೀನು ಮತ್ತು ಅವುಗಳಿಂದ ಹುಟ್ಟಿದ ಆಧುನಿಕ ಐರೋಪ್ಯ ಭಾಷೆಗಳಲ್ಲೂ ಅನೇಕ ನಾಮಪದಗಳೂ ಕ್ರಿಯಾಪದಗಳೂ ಸಾಮಾನ್ಯವಾಗಿ ಕಂಡುಬರುತ್ತವೆ. ಸಂಸ್ಕೃತದ 'ಪಿತೃ' ಇಂಗ್ಲೀಷಿನ



ಮಲಬಾರಿನ ಪಣಿಯನರ ಯುವಕ.

'ಫಾದರ್', ಸಂಸ್ಕೃತದ 'ಮಾತೃ' ಇಂಗ್ಲೀಷಿನ 'ಮದರ್', ಸಂಸ್ಕೃತದ 'ದ್ವಾರ' ಇಂಗ್ಲೀಷಿನ 'ಡೋರ್' ಸಂಸ್ಕೃತದ 'ಗವ್' ಇಂಗ್ಲೀಷಿನ 'ಗೋ'—ಹೀಗೆ ನೂರಾರು ಶಬ್ದಗಳಿವೆ. ಅಲ್ಲದೆ ಪ್ರಾಚೀನ ಆರ್ಯರ ದೇವತೆಗಳ ಹೆಸರುಗಳಿಗೂ ಗ್ರೀಕರ ದೇವತೆಗಳ ಹೆಸರುಗಳಿಗೂ ಸಾಮ್ಯವಿದೆ.

ಆರ್ಯಕುಲದವರು ಪಟ್ಟಣವಾಸಿಗಳಾಗಿದ್ದಿಲ್ಲ. ತಮ್ಮ ದನಗಳನ್ನಟ್ಟಿಕೊಂಡು ಅಲೆದಾಡಿ ಜೀವಿಸುವ ಜನರವರು. ಭಾರತದ ನದೀತೀರಗಳಿಗೆ ಬಂದು ತಮಗಿಂತ ಮೊದಲೇ ನೆಲೆಸಿದವರ ಕೋಟೆಕೊತ್ತಳಗಳನ್ನು ಧ್ವಂಸಮಾಡಿ, ಪಟ್ಟಣಗಳನ್ನು ಸೂರೆಗೊಂಡು ವಿಜಯೋನ್ಮತ್ತರಾಗಿ ಹಾಡಿ, ದೇವತೆಗಳಿಗೆ ಹರಕೆ ಹೊತ್ತರು ಆರ್ಯರು. ಆರ್ಯರ ಮಹಾಪೂರವನ್ನು ತಡೆಗಟ್ಟಲಾರದೆ ಇತರರು ದಕ್ಷಿಣಾಭಿಮುಖವಾಗಿ ತೆರಳಬೇಕಾಗಿ ಬಂದಿತಾದರೂ ಕೆಲವು ತಲೆಮಾರುಗಳ ಅನಂತರ ಹೊಸಬರೂ ಹಳಬರೂ ನೆರೆಮನೆಯವರಾಗಿ ನೆಲೆಸಿ ಒಬ್ಬರಿಂದೊಬ್ಬರು ಭಾಷೆ, ಆಚಾರಗಳು, ಪೂಜಾಕ್ರಮಗಳು, ಕಥಾಕವನಗಳು, ಉದ್ಯೋಗ ವೃತ್ತಿಗಳು-ಇವನ್ನೆಲ್ಲ ತಿಳಿದು ತಿಳಿಸಿ ಅತ್ತ ಆರ್ಯರದಲ್ಲದ, ಇತ್ತ ಅನಾರ್ಯರದೂ ಅಲ್ಲದ ಭಾರತೀಯ ಸಂಸ್ಕೃತಿಯೊಂದು ಹುಟ್ಟುವಂತಾಯಿತು.

ಆರ್ಯ ,ಅನಾರ್ಯ ಮಿಲನವು ಸಂಪೂರ್ಣವಾದ ಅನೇಕ ಶತಮಾನಗಳ ಅನಂತರ ಇತರ ಜನಾಂಗಧಾರೆಗಳೂ ಭಾರತ ಸಮುದ್ರಕ್ಕೆ ಬಂದು ಸೇರಿದುವು. ಕ್ರಿಸ್ತ ಪೂರ್ವ ನಾಲ್ಕನೇ ಶತಮಾನನಲ್ಲಿ ಕೆಲವೇ ಮಂದಿ ಯವನರೂ (ಗ್ರೀಕರು) ಅನಂತರ ಪರ್ಶಿಯಾ ದೇಶದ ಕಡೆಯಿಂದ ಪಾರ್ಥಿವರೂ ಬಕ್ಟ್ರೀರಿಯನರೂ ಹೂಣರೂ ತಂಡತಂಡವಾಗಿ ಭಾರತವನ್ನು ಪ್ರವೇಶಿಸಿ ಇಲ್ಲಿಯೇ ನೆಲೆನಿಂತರು. ಕ್ರಿಸ್ತ ಪೂರ್ವ ಒಂದನೇ ಶತಮಾನದಲ್ಲಿ ಶಕರೂ ಬಂದರು. ಆದರೆ ಈ ಆಗಂತುಕರ ಸಂಖ್ಯೆ ಹಿಂದಿನವರಿಗಿಂತ ಕಡಿಮೆಯಿದ್ದುದರಿಂದಲೂ ಅವರು ಧರ್ಮವಿಚಾರದಲ್ಲಾಗಲೀ ಸಂಸ್ಕೃತಿಯಲ್ಲಾಗಲೀ ಹಿಂದುಳಿದ ಜನರಾಗಿದ್ದುದರಿಂದಲೂ ಇಲ್ಲಿನ ಭಾಷೆ, ಮತ, ಆಚಾರಗಳನ್ನೇ ಅವಲಂಬಿಸಿ ಭಾರತದ ಇತರರೊಡನೆ ಬೆರೆತುಹೋದರು.

ಹತ್ತರಿಂದ ಹದಿನಾರನೇ ಶತಮಾನಗಳಲ್ಲಿ ಆಫ್ಘಾನಿಸ್ತಾನ, ತುರ್ಕಿ

ಸ್ತಾನ, ಮಧ್ಯ ಆಸ್ಯಗಳಿಂದ ಯೋದ್ಧರ ತಂಡಗಳು ದಾಳಿಮಾಡಲಾರಂಭಿಸಿ ಕ್ರಮೇಣ ಇಲ್ಲಿಯೇ ವಾಸಮಾಡಲಾರಂಭಿಸಿದವು. ಅವರೊಡನೆ ಕೆಲ ಮಂದಿ ಪಾರಸೀಕರೂ ಅರಬರೂ ಇದ್ದರು. ಈ ಸಲ ಬಂದವರು ಇಸ್ಲಾಮ್ ಧರ್ಮದಲ್ಲೇ ವಿಶ್ವಾಸವನ್ನಿಟ್ಟುಕೊಂಡವರಾಗಿದ್ದು ತಮ್ಮ ಕಟ್ಟುಕಟ್ಟಳೆಗಳೂ ಆಚಾರ ವಿಚಾರಗಳೂ ಶ್ರೇಷ್ಠವೆಂದು ಬಲವಾದ ವಾತ್ಸಲ್ಯವುಳ್ಳವರಾಗಿದ್ದುದರಿಂದ ಭಾರತದ ಇತರ ಮತಗಳೊಡನೆ ಅವರು ಬೆರೆತುಹೋಗಲಿಲ್ಲ. ಮತ ಭೇಧ ಉಳಿದು ಬಂದರೂ ಭಾರತದ ಜನ ರಲ್ಲೇ ಅನೇಕರು ಮುಸ್ಲಿಮರಾಗಿ ಪರಕೀಯರೊಡನೆ ವಿವಾಹ ಸಂಪರ್ಕ ಮಾಡಿಕೊಂಡುದರಿಂದ ಜನಾಂಗದ ದೃಷ್ಟಿಯಿಂದ ಮಿಲನವಾಯಿತೆಂದೇ ಹೇಳಬಹುದು. ಇಲ್ಲಿಯೇ ರಾಜ್ಯಕಟ್ಟಿದವರಿಗೆ ಹೊರಗಿನ ರಾಜ್ಯಗಳ ಅಧಿಕಾರ ತಪ್ಪಿ ರಾಜಕೀಯದಲ್ಲಿ ಸಹ ಭಾರತದೊಳಗೆ ಬಂದವರು ಇಲ್ಲಿನ ವರೇ ಆಗಿಹೋದರು.

ಹದಿನೈದರಿಂದ ಹತ್ತೊಂಭತ್ತನೇ ಶತಮಾನಗಳ ವರೆಗೆ ಬ್ರಿಟಿಷರು, ಡಚ್ಚರು, ಫ್ರೆಂಚರು, ಪೋರ್ತುಗೀಸರೇ ಮೊದಲಾದ ಐರೋಪ್ಯರು ಭಾರತಕ್ಕೆ ಬಂದು, ವ್ಯಾಪಾರಕ್ಕೆಂದು ಬೀಡು ಬಿಟ್ಟು, ಕ್ರಮೇಣ ಸಾಮ್ರಾಜ್ಯ ವನ್ನೇ ಕಟ್ಟಿಕೊಂಡರೂ ಅವರು ಸಾವಿರಗಟ್ಟಲೆಯಲ್ಲಿ ಇಲ್ಲಿಯೇ ವಾಸ ಮಾಡಲಿಲ್ಲ. ಅಲ್ಲೊಬ್ಬರು ಇಲ್ಲೊಬ್ಬರಂತೆ ಭಾರತದಲ್ಲೇ ವಾಸಮಾಡಿರ ಬಹುದು; ಐರೋಪ್ಯರೊಡನೆ ಭಾರತದವರ ವಿವಾಹಗಳಾಗಿ ಎಂಗ್ಲೋ ಇಂಡಿಯನರೆಂಬ ಜಾತಿಯವರೂ ನಮ್ಮ ಜನಾಂಗದ ಭಾಗವಾಗಿದ್ದಾರೆ, ಆದರೆ ಅವರ ಸಂಖ್ಯೆ ತೀರ ಅಲ್ಪವಿದ್ದುದರಿಂದ ಐರೋಪ್ಯರು ನಮ್ಮ ಮೇಲೆ ರಾಜಕೀಯ, ಸಾಮಾಜಿಕ, ಆರ್ಥಿಕ ಪ್ರಭಾವ ಬೀರಿದರೂ ಭಾರತದ ಜನರ ಅಂಗವಾಗಿ ಬೆರೆತಿಲ್ಲವೆಂದೇ ಹೇಳಬಹುದು.

ಪ್ರತಿಯೊಂದು ಸಲ ಗಡಿನಾಡಿನ ಆ ಕಡೆಯಿಂದ ಜನರು ಬಂದೊ ಡನೆ ಅವರಿಗೂ ಹಿಂದಿನವರಿಗೂ ಯುದ್ಧವಾಗುವುದು ಸಹಜ. ದಟ್ಟನೆ ಜನತುಂಬಿದ ಒಂದು ರೈಲು ಬಂಡಿಯಲ್ಲಿ ಇನ್ನೊಬ್ಬ ಪ್ರಯಾಣಿಕನು ಸೇರಲಿಕ್ಕೆ ಬಂದರೆ ಮೊದಲಿದ್ದವರು ಅವನನ್ನು ಹೊರದೂಡುವ ಯತ್ನ ಮಾಡುತ್ತಾರೆ. ಒಮ್ಮೆ ಅವನು ಒಳಗೆ ಬಂದನೆಂದರೆ ಇತರರೊಡನೆ

ಅವನೂ ಸೇರಿ ಇನ್ನಾರೂ ಒಳ ನುಗ್ಗದಂತೆ ಯತ್ನಿಸುತ್ತಾನಷ್ಟೆ. ಹಾಗೆಯೇ ಒಳಗೆ ಹೋಗುವಾಗ ಯುದ್ಧ, ಅನಂತರ ಮೈತ್ರಿ, ಮಿಲನ, ಹೀಗಾಗಿ ಈಗಿನ ಭಾರತೀಯರಲ್ಲಿ ಇವನು ದ್ರಾವಿಡ,ಅವನು ಆರ್ಯ ಮತ್ತೊಬ್ಬನು ಮುಘಲ ಮಗುದೊಬ್ಬ ಮಂಗೋಲಿಯನನೆಂದು ತೋರಿಸಿಕೊಡುವುದು ಅಸಾಧ್ಯ. ಆದಿವಾಸಿಗಳನ್ನು ಇತರರೊಡನೆ ಸೇರುವಂತೆ ಮಾಡುವುದು ಇನ್ನೂ ಮುಗಿದಿಲ್ಲವಾದರೂ ಹೆಚ್ಚಿನ ಮಟ್ಟಿಗೆ ಭಾರತೀಯರೆಂಬ ಮಿಶ್ರಜನಾಂಗ ನಿರ್ಮಾಣವಾಗಿದೆ ಎಂದೇ ಹೇಳಬಹುದು.

ನಾವು ರಾಷ್ಟ್ರಗೀತೆಯಾಗಿ ಆರಿಸಿಕೊಂಡಿರುವ ಠಾಕೂರರ ಪದ್ಯದ ಎರಡನೇ ಚರಣದಲ್ಲಿ "ಅಹರಹ ತವ ಆಹ್ವಾನ ಪ್ರಚಾರಿತ ಶುನಿ ತವ ಉದಾರವಾಣೀ । ಹಿಂದು, ಬೌದ್ಧ, ಶಿಖ, ಜೈನ, ಪಾರಸಿಕ, ಮುಸಲ್ಮಾನ ಕ್ರಿಸ್ತಾನೀ । ಪೂರಬ ಪಶ್ಚಿಮ ಆಸೇ ತವ ಸಿಂಹಾಸನ ಪಾಸೇ, ಪ್ರೇಮಹಾರ ಹಮುಗಾಂಥಾ", ಎಂದಿದೆ. ಭಾರತ ಭಾಗ್ಯವಿಧಾತನ ಉದಾರ ವಾಣಿಯ ಆಹ್ವಾನವನ್ನು ಕೇಳಿ ಬಂದ ವಿವಿಧ ಮತದವರೂ ವಿವಿಧ ಪ್ರದೇಶವರೂ ಒಂದಾಗಿ ಪ್ರೇಮಹಾರವನ್ನು ಹೆಣೆಯುತ್ತಿದ್ದಾರಂತೆ! ಎಂಥ ಮಹತ್ತಾದ ಆದರ್ಶ! ಮೇಲು ಕೀಳಿಲ್ಲ. ಆಳುವ ಅಡಿಯಾಳಾಗಿರುವ ಜನರಿಲ್ಲ. ಮೂಲವಾಸಿಗಳು, ಪರಕೀಯರೆಂದಿಲ್ಲ. ಎಲ್ಲರೂ ಅತಿಥಿಗಳು, ಎಲ್ಲರೂ ಸಮಾನರು!

ರಾಷ್ಟ್ರಕವಿಯ ಉದಾರವಾಣಿಯು ನಮ್ಮ ಜನರಿಗೆ ತೀರ ಹೊಸದಲ್ಲ. ಅತಿ ಪ್ರಾಚೀನ ಕಾಲದಿಂದಲೂ 'ಆಸೇತು ಹಿಮಾಚಲ' ಎಂದರೆ ರಾಮೇಶ್ವರದ ದಕ್ಷಿಣ ತೀರದಿಂದ ಹಿಮಾಚಲದ ವರೆಗೆ ಹರಡಿರುವ ಈ ವಿಶಾಲ ಭೂಮಿ ಒಂದೇ ದೇಶ, ಇಲ್ಲಿನ ಜಾನಪದ ಒಂದೇ ಎಂಬ ಭಾವನೆಯನ್ನು ನಮ್ಮ ಪೂರ್ವಜರು ನಮ್ಮಲ್ಲಿ ಬಿತ್ತಿ ಪೋಷಿಸುತ್ತ ಬಂದಿದ್ದಾರೆ. ಪ್ರತಿಯೊಂದು ನವೀನ ಜನಾಂಗವು ಬಂದಾಗ ಯುದ್ಧಗಳಾಗಿವೆ. ಆದರೂ ಯಾರೂ ಯಾರನ್ನೂ ನಿರ್ನಾಮಮಾಡಿಲ್ಲ; ಐರೋಪ್ಯರು ಅಮೇರಿಕದ ಜನರನ್ನು ನಿರ್ನಾಮಮಾಡಿದ ರೀತಿಯಲ್ಲಿ ಭಾರತದಲ್ಲಿ ಎಂದೂ ನಡೆದಿಲ್ಲ.

ಕಾಶ್ಮೀರದ ಗುಡ್ಡಗಾಡುಗಳವರೊಡನೆ, ರಾಜಸ್ಥಾನದ ಮರುಭೂಮಿಯವರೊಡನೆ, ಮಲಬಾರಿನ ಹಳ್ಳಿಯವರೊಡನೆ ಮಾತುಕತೆ

ನಡೆಸಿದರೆ ಅವರಲ್ಲಿ ತೋರಿಬರುವ ನೀತಿಯ ನೆಲೆಗಟ್ಟು, ಜೀವನದ ನೋಟ, ದಿನನಿತ್ಯದ ವ್ಯವಹಾರದಲ್ಲಿ ನಡೆಯುವ ರೀತಿಗಳು—ಇವುಗಳಲ್ಲಿ ಸಾಮ್ಯ ಕಂಡುಬರುವುದು ಖಂಡಿತ. ಭಾರತೀಯರ ರೂಪ, ಬಣ್ಣಗಳಲ್ಲಿ ಭೇಧವಿದ್ದರೂ ಅಂತರಂಗ ಒಂದೇ ಬಣ್ಣದ್ದಾಗಿದೆಯೆಂದು ಯಾವ ವಿಮರ್ಶಕನಿಗೂ ಭಾಸವಾಗುವುದು.

ಯುರೋಪಿನ ವಿವಿಧ ಜನಾಂಗಗಳಲ್ಲೂ ಇಂತಹ ಸಾಮ್ಯವನ್ನು ಕಾಣಬಹುದು, ಯುರೋಪು ಒಂದೇ ಎನ್ನಬಹುದೇ ಎಂಬ ಅಡ್ಡವಾತನ್ನೂ ಎತ್ತಬಹುದು. ಹೌದು, ಯುರೋಪಿನಲ್ಲೂ ಅನೇಕ ರೀತಿಯ ಸಾಮ್ಯವಿದೆ, ಅಂತರಂಗದ ಐಕ್ಯವೂ ಇತಿಹಾಸದ ಮಧ್ಯಕಾಲದಲ್ಲಿತ್ತು. ಆದರೆ ತಾವು ಜರ್ಮನರು, ತಾವು ಫ್ರೆಂಚರು, ತಾವು ಬ್ರಿಟಿಷರು ಎಂಬ ಸಂಕುಚಿತದ ಆಂತರಿಕ ರಾಷ್ಟ್ರೀಯತೆಯು ವಿಪರೀತವಾಗಿ ಬೆಳೆದು, ಬೆಳೆಸಿ ಯುರೋಪಿನ ಐಕ್ಯವು ಬಾಡಿ ನೆಲಸಮವಾಗುವಂತೆ ಮಾಡಿದರು. ಅದರ ದುಷ್ಪರಿಣಾಮಗಳ ಕಹಿಯನ್ನು ಉಂಡು ಸಾಕುಸಾಕಾಗಿ ಈಗೀಗ 'ಯುರೋಪಿಯನ್ ಯೂನಿಯನ್' ಎಂದು ಮೊದಲಾದ ಸಂಸ್ಥೆಗಳ ಮೂಲಕ ತಿರುಗಿ ಇನ್ನೊಂದು ರೀತಿಯ ಐಕ್ಯಕ್ಕಾಗಿ ಪ್ರಯತ್ನಮಾಡುತ್ತಿದ್ದಾರೆ. ನಾವು ಯುರೋಪಿನ ಅನುಭವವನ್ನು ಕಂಡು ನಮ್ಮ ನಮ್ಮ ಕನ್ನಡನಾಡು, ತಮಿಳುನಾಡು, ಆಂಧ್ರ ಕೇರಳಗಳ ಮಮತೆಯನ್ನು ಬಿಟ್ಟು ಕೊಡದೆ ಸಹ ಭಾರತದ ಐಕ್ಯಕ್ಕೆ ಭಂಗಬಾರದ ರೀತಿಯಲ್ಲಿ ವರ್ತಿಸುವುದು ಅಗತ್ಯ.

---

# ೩. ಇತಿಹಾಸ ದರ್ಶನ

ಇತಿಹಾಸವೆಂದಾಕ್ಷಣ ಮೂಗುಮುರಿಯುವವರಿದ್ದಾರೆ. ಬರೀ ಇಸವಿಗಳು, ಯುದ್ಧಗಳು, ಪಟ್ಟಕ್ಕಾಗಿ ಅಂತಃಕಲಹಗಳು—ಇವೇ ತುಂಬಿರುವ ಕೆಲವು ಪುಸ್ತಕಗಳನ್ನು ಓದಿದ ವಿದ್ಯಾರ್ಥಿಗಳಿಗಂತೂ ಇತಿಹಾಸವೆಂದರೆ ನಡುಕ ಹುಟ್ಟುವುದೂ ಸಹಜ. ನಮ್ಮ ಪೂರ್ವಜರು ಮಾಡಿದ ಸತ್ಕಾರ್ಯ ಮಹತ್ಕಾರ್ಯಗಳ ಅಥವ ತಪ್ಪು ತಿಳಿಗೇಡಿತನಗಳ ಒಟ್ಟು ಫಲವೇನೆಂದು ತಿಳಿದು ಮುಂದಡಿ ಇಡಬೇಕಾದರೆ, ಯಾವ ದಿಕ್ಕಿಗೆಂದು ತಿಳಿದರೆ ಸಾಲದೇ ಎನ್ನುವ ಪ್ರಶ್ನೆಯೂ ಏಳಬಹುದು.

ಎರಡು ಕಾವ್ಯಗಳನ್ನು ಪರಿಶೀಲಿಸುವಾಗ ಒಂದರಲ್ಲಿ ಕಂಡುಬಂದ ಅಲಂಕಾರಗಳಾಗಲೀ ನುಡಿಗಟ್ಟುಗಳಾಗಲೀ ಇನ್ನೊಂದರಲ್ಲೂ ತೋರಿಬಂದರೆ ಯಾವುದು ಮೊದಲು ಪ್ರಕಟವಾದುದು, ಯಾವುದು ಮತ್ತೆ ಎಂದು ತಿಳಿಯುವ ಅನುಕೂಲ್ಯವಿಲ್ಲದಿದ್ದಲ್ಲಿ ಆಯಾ ಕವಿಗಳಿಗೆ ಸಲ್ಲಬೇಕಾದ ಮನ್ನಣೆಯನ್ನು ಸಲ್ಲಿಸಲು ಸಾಧ್ಯವಾಗುವುದಿಲ್ಲ. ಅರ್ಥಶಾಸ್ತ್ರ, ನೀತಿಶಾಸ್ತ್ರಗಳಲ್ಲಂತೂ ಯಾರು ಯಾವಾಗ ಏನು ಬೋಧಿಸಿದರೆಂದು ತಿಳಿಯದೆ ಅದೂ ಒಂದು ಬೋಧನೆ ಇದೂ ಒಂದು ಬೋಧನೆ ಎಂದುಕೊಂಡರೆ, ಅವುಗಳು ಬೋಧಿಸಲ್ಪಟ್ಟ ಕಾಲ, ಸ್ಥಿತಿಗಳ ಹಿನ್ನೆಲೆಗಳು ಗೊತ್ತಾಗದೆ ಎಲ್ಲವನ್ನೂ ಅಂಧಶ್ರದ್ಧೆಯಿಂದ ಮಾನಿಸಬೇಕಾದೀತು, ಅಥವಾ ತಿರಸ್ಕರಿಸಬೇಕಾದೀತು.

ಚರಿತ್ರೆಯ ಗತಿಯನ್ನು ತಿಳಿಯಲಿಕ್ಕೆ ಬರೀ ಶತಮಾನ, ವರ್ಷಗಳನ್ನು ಉಪಯೋಗಿಸದೆ ಅನೇಕಮಂದಿ ರಾಜರ ಹೆಸರೆತ್ತಿ ಅವರ ಆಳ್ವಿಕೆಯ ಸಮಯದಲ್ಲಿ ಆದ ವಿಷಯಗಳೆಂದು ವಿವರಿಸುವುದು ಅನಗತ್ಯವೆಂದು ಎಣಿಸಬಾರದು. ಹಿಂದಿನ ಕಾಲದಲ್ಲಿ ಅರಸರೆಂದರೆ ಬರೀ ಪೂಜೆಯ ಮೂರ್ತಿಗಳಂತಿರಲಿಲ್ಲ. ಒಂದು ದೇಶದ ಭದ್ರತೆಯಾಗಲೀ ಪ್ರಗತಿಯಾಗಲೀ ಬಹುಮಟ್ಟಿಗೆ ಆಯಾಕಾಲದ ಅರಸನ ಮೇಲೆ ಹೊಂದಿಕೊಂಡಿದ್ದುವು. ಪರರಾಜ್ಯಗಳ ಮೇಲೆ ದಂಡೆತ್ತಿ ಹೋದವರೂ ಸಾಮ್ರಾಜ್ಯ

ಸ್ಥಾಪಕರೂ ಹೆಚ್ಚಿನವುಟ್ಟಿಗೆ ತಂತವ್ಮ ಅಭಿಲಾಷೆ, ಮಹತ್ವಾಕಾಂಕ್ಷೆಗಳಿಂದ ಪ್ರೇರಿತರಾಗಿದ್ದರೂ ಅವರಿಂದಾಗಿ ಸೈನ್ಯಗಳೂ ಪರಿವಾರಗಳೂ ಜನಸಮುದಾಯವೂ ಒಂದೆಡೆಯಿಂದ ಇನ್ನೊಂದೆಡೆಗೆ ಚಲಿಸುವಂತಾಗಿ ವಿವಿಧ ತರದ ಜನರೊಳಗೆ ಸಂಪರ್ಕ ಬೆಳೆಯುವಂತಾಯಿತು. ಸಂಪರ್ಕವು ಆರಂಭದಲ್ಲಿ ವೈರದಿಂದೊಡಗೂಡಿದ್ದರೂ ಕೊನೆಗೆ ಅದು ಮೈತ್ರಿಯಾಗಿ ಪರಿಣಮಿಸಲು ಸಾಧ್ಯವಾಯಿತು. ಬೇರೆಬೇರೆ ಕಡೆಗಳ ಜನರು ಒಂದೆಡೆಯಲ್ಲಿ ಸೇರಿ ಮಿಶ್ರವಾಗಿ ಹೊಸದೊಂದು ಸಂಯುಕ್ತ ಶಕ್ತಿಯುದ್ಭವಿಸಿ, ನಾನಾರೀತಿಯ ಹೊಸ ಮಾರ್ಪಾಟುಗಳು ಜನಜೀವನದಲ್ಲಿ ಉದ್ಭವಿಸುವ ನಿದರ್ಶನಗಳನ್ನು ಇತಿಹಾಸದ ಪ್ರತಿಯೊಂದು ಪರಿಚ್ಛೇದದಲ್ಲೂ ನಾವು ಕಾಣಬಹುದು.

ರಾಜರಲ್ಲನೇಕರು ಯುದ್ಧಗಳಲ್ಲೇ ಮಗ್ನರಾಗಿರದೆ ಪ್ರಜಾಪಾಲನೆಗಾಗಿ ಶ್ರಮವಹಿಸಿ ಜನರ ಜೀವನವನ್ನು ಸುಧಾರಿಸುವ ಯತ್ನಗಳನ್ನು ಮಾಡಿದ್ದಾರೆ. ದೇವಸ್ಥಾನಗಳ ನಿರ್ಮಾಣ, ಮಾರ್ಗಗಳ ರಚನೆ, ಸೇತುವೆ, ಅಣೆಕಟ್ಟುಗಳನ್ನು ಕಟ್ಟುವಿಕೆ, ಕವಿಗಳಿಗೂ ಕಲಾವಿದರಿಗೂ ಪಂಡಿತರಿಗೂ ಪ್ರೋತ್ಸಾಹ ಕೊಡುವಿಕೆ, ಇವುಗಳಿಂದ ಜನರ ಜೀವನದ ಮೇಲೆ ಹಲವಾರು ರೀತಿಯ ಪರಿಣಾಮಗಳುಂಟಾಗುವುದಿಲ್ಲವೇ? ಒಂದು ಹೊಸ ರಸ್ತೆ ಅಥವಾ ಸೇತುವೆ ಪೂರ್ತಿಯಾದೊಡನೆ ಸರಕುಗಳ ಸಾಗಾಟದ ದಿಕ್ಕೇ ಬೇರೆಯಾಗುವುದನ್ನೂ ಅಂಗಡಿಮನೆಗಳು ಇಲ್ಲದಿದ್ದಲ್ಲಿ ಏಳುವುದನ್ನೂ ಇದ್ದ ಅಂಗಡಿಮನೆಗಳು ಬರಿದಾಗುವುದನ್ನೂ ಕಣ್ಣಾರೆ ಕಂಡಿದ್ದೇವೆ. ಇಂಥ ನೂರಾರು ಬದಲಾವಣೆಗಳಾದರೆ ಸಮಾಜದಲ್ಲಿ ಒಂದು ರೀತಿಯ ಶಾಂತಕ್ರಾಂತಿಯೇ ಎದ್ದಂತಾಗುವುದಷ್ಟೆ? ಹೀಗೆ ಸಮಾಜದ ಚಲನವಲನಗಳಿಗೂ ಏರಿಳಿತಗಳಿಗೂ ಕಾರಣರಾದ ರಾಜರ ಹೆಸರುಗಳನ್ನು ಚರಿತ್ರೆಯ ಮೈಲುಕಲ್ಲುಗಳೆಂದು ಮಾತ್ರ ಎಣಿಸದೆ ದೀಪಸ್ತಂಭಗಳೆಂದು ಎಣಿಸುವುದೂ ನ್ಯಾಯವಾದುದು.

ಭಾರತದ ಇತಿಹಾಸದಲ್ಲಿ ಬೆಳಗಿದ ಅನೇಕ ರಾಜರಲ್ಲಿ ಮೊತ್ತಮೊದಲಿಗೆ ಹೊಳೆಯುವ ಹೆಸರು ಚಂದ್ರಗುಪ್ತ ಮೌರ್ಯನದು. 2250 ವರ್ಷಗಳ ಹಿಂದೆಯೇ ಬಾಳಿದ ಮಹಾರಾಜನವನು. ಕೌಟಿಲ್ಯನೆಂದೂ

ಚಾಣಕ್ಯನೆಂದೂ ಪ್ರಸಿದ್ಧನಾಗಿದ್ದ ಬ್ರಾಹ್ಮಣನೊಬ್ಬನ ಸಹಾಯದಿಂದ ಚಂದ್ರಗುಪ್ತನು ಮಗಧದ (ಬಿಹಾರ ರಾಜ್ಯದಲ್ಲಿದೆ) ರಾಜನಾಗಿ ಒಂದೊಂದಾಗಿ ತನ್ನ ಸುತ್ತಲಿನ ರಾಜ್ಯಗಳನ್ನು ಗೆದ್ದು ಭಾರತದ ಇತಿಹಾಸದಲ್ಲೇ ಪ್ರಥಮ ಸಾರ್ವಭೌಮನೆಂಬ ಕೀರ್ತಿ ಪಡೆದಿದ್ದಾನೆ. ಸುಸಜ್ಜಿತವಾದ, ಆಜ್ಞಾಬದ್ಧವಾದ, ಬಲವಾದ ಸೈನ್ಯ ಮತ್ತು ನ್ಯಾಯಪರಿಪಾಲಕರೂ ನಿಷ್ಪಕ್ಷಪಾತಿಗಳೂ ಕಾರ್ಯಾಸಕ್ತರೂ ಆದ ರಾಜಸೇವಕರು—ಈ ಎರಡನ್ನು ರಾಷ್ಟ್ರದ ಎರಡು ಭುಜಗಳಂತೆ ಬಲಗೊಳಿಸಿ ಒಂದು ಶತಮಾನಕ್ಕಿಂತ ಹೆಚ್ಚುಕಾಲ ಬಾಳಿದ ಮಹಾರಾಜ್ಯದ ಸ್ಥಾಪನೆಯನ್ನು ಚಂದ್ರಗುಪ್ತನು ಮಾಡಿದನು. ಯಾವುದೇ ದೇಶವು ಪ್ರತಿಭಾಸಂಪನ್ನವಾಗಬೇಕಾದರೆ ಅದಕ್ಕೆ ಸೈನ್ಯಬಲ ಸಾಕಷ್ಟಿರಬೇಕು, ಅದರ ಆಡಳಿತೆಯಲ್ಲಿ ಲಂಚ ಮೋಸಗಳಿರಕೂಡದೆಂದು ಚಂದ್ರಗುಪ್ತನು ಹಾಕಿಕೊಟ್ಟ ಮೇಲ್ಪಂಕ್ತಿಗಳು ಈಗಲೂ ಎಲ್ಲಾ ದೇಶದ ಜನರಿಗೂ ಅನುಕರಣೀಯವಾಗಿವೆ.

ಚಂದ್ರಗುಪ್ತನ ಮೊಮ್ಮಗನಾದ ಅಶೋಕನ ಧವಲಕೀರ್ತಿಯು ದಿಗಂತವ್ಯಾಪಿಯಾಗಿದೆ. ಮೊತ್ತಮೊದಲು ಅಶೋಕನು ಸಹ ಚಂದ್ರಗುಪ್ತನಂತೆ ರಾಜ್ಯವಿಸ್ತಾರದ ಅಭಿಲಾಷೆಯಿಂದ ಕಳಿಂಗ ದೇಶದ (ಉತ್ಕಲ ರಾಜ್ಯದಲ್ಲಿ) ಮೇಲೆ ದಂಡೆತ್ತಿ ಹೋದರೂ ಅವನಲ್ಲಿ ಯುದ್ಧ ಪರಾಙ್ಮುಖತೆಯುಂಟಾಗಿ ತನಗಿಂತ 200 ವರ್ಷಗಳ ಹಿಂದೆ ಬುದ್ಧನು ಬೋಧಿಸಿದ ತತ್ವಗಳಿಗೆ ಮನಸೋತನು. ಸತ್ಯ, ಕರುಣೆ, ಅಹಿಂಸೆ, ನಿಷ್ಕಾಮ—ಇವುಗಳಿಂದ ರಾಜ್ಯಗಳನ್ನಲ್ಲ, ರಾಜ್ಯಗಳ ಜನರ ಅಂತರಂಗವನ್ನು ಸೂರೆಗೊಳ್ಳಬೇಕೆಂಬ ಲವಲವಿಕೆಯು ಅಶೋಕನಲ್ಲುಂಟಾಯಿತು. ಅಷ್ಟರವರೆಗೆ ಬಡವರೂ ಜನಸಾಮಾನ್ಯರೂ ಮನ್ನಿಸುತ್ತಿದ್ದ ಬುದ್ಧ ಭಿಕ್ಷುಗಳಿಗೆ, ಚಂದ್ರಗುಪ್ತನು ಕೇಳಲೇ ಇಲ್ಲವೆಂಬಂಥ ಬುದ್ಧನ ಬೋಧನೆಗಳಿಗೆ, ಫಕ್ಕನೆ ರಾಜಸತ್ಕಾರ, ಆಶ್ರಯಗಳು ಪ್ರಾಪ್ತವಾದುವು. ಬುದ್ಧನ ಮಹಾವಾಕ್ಯಗಳು ಅಶೋಕನ ಎದೆಗೆ ನಾಟಿದುವು. ಅವುಗಳಿಗೆ ಅವನು ಸಂಪೂರ್ಣ ಮನಸೋತು ಬೌದ್ಧಧರ್ಮ ಪ್ರಚಾರಕ್ಕಾಗಿ ಅವಿಶ್ರಾಂತವಾಗಿ ಅನೇಕ ರೀತಿಯಲ್ಲಿ ಕಾರ್ಯಾಸಕ್ತನಾದನು. ಅವನ ಪ್ರಭಾವದಿಂದಲೇ ಬೌದ್ಧಧರ್ಮವು ದಕ್ಷಿಣಭಾರತ, ಸಿಂಹಳ, ಗಾಂಧಾರ (ಅಫ್ಘಾನಿಸ್ಥಾನ) ಗಳವರೆಗೆ ಹಬ್ಬಿತು.

ಅಶೋಕನ ಕಾಲದ ಅನಂತರ ಐದು ಶತಮಾನಗಳ ವರೆಗೆ ಮೌರ್ಯ ಸಾಮ್ರಾಜ್ಯದಷ್ಟು ವಿಸ್ತಾರವಾದ ಪ್ರದೇಶವನ್ನು ಆಳಿದ ರಾಜರು ಹುಟ್ಟಲಿಲ್ಲ. ಹಾಗೆಂದು ಈ ಅಂತರದಲ್ಲಿ ಆಡಳಿತೆಯೇ ಇರಲಿಲ್ಲ, ಎಲ್ಲೆಲ್ಲೂ ಅವ್ಯವಸ್ಥೆಯೆಂದು ಯಾರೂ ಎಣಿಸಬಾರದು. ಅಲ್ಲಲ್ಲಿ ಪ್ರಬಲವಾದ ರಾಜ್ಯಗಳಿದ್ದು ಆಯಾ ಭಾಗದ ಪ್ರಜೆಗಳ ರಕ್ಷಣೆ ಪೋಷಣೆಗಳನ್ನು ಉತ್ತಮ ರೀತಿಯಲ್ಲಿ ನೋಡಿಕೊಂಡಿದ್ದು, ವಿವಿಧ ರೀತಿಯ ಪ್ರಗತಿಗೆ ಸಹಾಯ ಮಾಡಿವೆ. ಅಂಥ ರಾಜ್ಯಗಳಲ್ಲಿ ಆಂಧ್ರದಲ್ಲೂ ದಕ್ಷಿಣದಲ್ಲೂ ವ್ಯಾಪಿಸಿದ ಶತವಾಹನರ ರಾಜ್ಯವನ್ನು ಪ್ರಸ್ತಾವಿಸುವುದು ಸಹಜವೇ ಸರಿ. ಭಾರತದ ಹೊರನಾಡುಗಳಿಂದ ಬೇರೆ ಬೇರೆ ಜನಾಂಗಗಳು ಧಾರೆಧಾರೆಯಾಗಿ ಒಳಹರಿದು ಇಲ್ಲಿನ ಜನರೊಡನೆ ಕಲೆತು ಮಿಶ್ರಜನ, ಮಿಶ್ರಭಾಷೆ, ಮಿಶ್ರರೀತಿಗಳು ಹುಟ್ಟುತ್ತಿದ್ದ ಶತಮಾನಗಳವು. ಆಗಂತುಕರಲ್ಲಿ ಅತಿಪ್ರಬಲರೆಂದರೆ ಕುಶಾಣರು. ಕುಶಾಣ ಪ್ರಮುಖರಲ್ಲಿ ನಾವು ಮರೆಯಬಾರದ ಹೆಸರೆಂದರೆ ಕಣಿಷ್ಕನದು. ಈಗ ಪಾಕಿಸ್ತಾನಕ್ಕೆ ಸೇರಿದ ಪಂಜಾಬಿನ ಪೇಶಾವರದ ಹತ್ತಿರ ಅವನ ರಾಜಧಾನಿಯಿತ್ತು. ಪಂಜಾಬು, ಮಾಲವ, ಗಂಗಾತೀರಗಳನ್ನು ಅವನು ಶಾಸಿಸುತ್ತಿದ್ದನು. ಬೌದ್ಧಧರ್ಮವು ಇನ್ನೂ ಮುಂದೆ ಮಧ್ಯ ಆಸ್ಯಕ್ಕೂ ಚೀನಾದೇಶಕ್ಕೂ ಮುಟ್ಟುವಂತೆ ಕಣಿಷ್ಕನು ಮಾಡಿದುದರಿಂದ ಅವನನ್ನು ದ್ವಿತೀಯ ಅಶೋಕನೆಂದು ಬೌದ್ಧಧರ್ಮಿಗಳು ಗಣಿಸುವುದು ತಪ್ಪಲ್ಲ.

ಕ್ರಿಸ್ತಶಕ ನಾಲ್ಕನೇ ಶತಮಾನದಿಂದ ಐದನೇ ಶತಮಾನದ ವರೆಗೆ ಮಗಧಾಧಿಪತಿಗಳು ಪುನಃ ಭಾರತದಲ್ಲಿ ಮಹಾರಾಜ್ಯಸ್ಥಾಪಕರಾದರು. ಇವರಲ್ಲಿ ಪ್ರಖ್ಯಾತನಾದವನ ಹೆಸರು ಸಹ ಚಂದ್ರಗುಪ್ತನೆಂದಿದ್ದರೂ ಇವನು ಮೌರ್ಯವಂಶಜನಲ್ಲ. ಆದುದರಿಂದ ಈ ವಂಶದವರನ್ನು ಗುಪ್ತರೆಂದು ಹೇಳುವ ರೂಢಿಯಿದೆ. ಗುಪ್ತರ ಕಾಲದಲ್ಲಿ ಫಾಹಿಯಾನನೆಂಬ ಚೀನಾದೇಶದ ಯಾತ್ರಿಕನು ಇಲ್ಲಿಗೆ ಬಂದಿದ್ದು ಅವನ ಬರೆಹಗಳಿಂದ ಗುಪ್ತರ ಕಾಲದ ಭಾರತದ ಕೀರ್ತಿಯನ್ನು ತಿಳಿಯಬಹುದಾಗಿದೆ. ಗುಪ್ತರ ಆಳ್ವಿಕೆಯಲ್ಲಿ ಪ್ರಾಚೀನ ಆರ್ಯಧರ್ಮವು ಬದಲಾಗಿ ಅದು ಅರ್ವಾಚೀನ ಹಿಂದೂ ಧರ್ಮದ ಸ್ವರೂಪವನ್ನು ತಾಳಿತೆಂದು ಹೇಳಬಹುದು.



ಅಶೋಕ ಸ್ತಂಭ.



ಪುಲಿಕೇಶಿಯ ದರ್ಬಾರು—ಅಜಂತಾ ಗುಹಾಲಯಗಳಲ್ಲಿನ ಚಿತ್ರಗಳಲ್ಲೊಂದು.

ಕಾಳಿದಾಸನಂಥ ಕವಿಗಳ ಕೃತಿಗಳಿಂದ ಸಂಸ್ಕೃತ ಸಾಹಿತ್ಯವು ಸರ್ವಮಾನ್ಯವಾದುದೂ ಗುಪ್ತರಾಳ್ವಿಕೆಯಲ್ಲಿ.

ಗುಪ್ತರ ಸಮಕಾಲೀನರಾಗಿ ದಕ್ಷಿಣದಲ್ಲಿ ಪಲ್ಲವರೂ ದಕ್ಷಿಣದಲ್ಲಿ ಕದಂಬರೂ ಗಂಗರೂ ರಾಜ್ಯಗಳನ್ನಾಳಿ ಪ್ರಜೆಗಳ ಪಾಲನೆಗೂ ಶಿಲ್ಪ, ಕಲೆಗಳ ಪ್ರೋತ್ಸಾಹಕ್ಕೂ ಕಾರಣರಾದರು.

ಗುಪ್ತರ ಅನಂತರ ಮತ್ತೊಮ್ಮೆ ಐದಾರು ಶತಮಾನಗಳ ತನಕ ಸಾಮ್ರಾಜ್ಯ ಸ್ಥಾನವನ್ನೇರಿದ ರಾಜ್ಯವಿರಲಿಲ್ಲ. ಈ ಅವಧಿಯಲ್ಲಿ ತಂತಮ್ಮ ರಾಜ್ಯಗಳನ್ನಾಳಿ ಕೀರ್ತಿಪಡೆದವರಲ್ಲಿ ಕನೋಜದ ಹರ್ಷವರ್ಧನನನ್ನೂ ಕರ್ಣಾಟಕದ ಎರಡನೇ ಪುಲಿಕೇಶಿಯರನ್ನೂ ಮರೆಯಲಾಗದು. ಹರ್ಷನ ಆಸ್ಥಾನಕ್ಕೆ ಬಂದ ಚೀನಾಯಾತ್ರಿಕ ಯುವಾನ್ ಚ್ವಾಂಗನು ದಕ್ಷಿಣಕ್ಕೂ ಬಂದಿದ್ದನು. ತಾನು ಹೋದಲ್ಲೆಲ್ಲ ಕಂಡ ವಿಶೇಷಗಳನ್ನು ಅವನು ಬರೆದಿಟ್ಟಿದ್ದಾನೆ. ಆಗಿನ ಭಾರತದ ಕೃಷಿ, ಕೈಗಾರಿಕೆಗಳ ಉನ್ನತಿ, ವಿದ್ಯಾಪ್ರಸಾರ, ವಿಶ್ವವಿದ್ಯಾಲಯಗಳ ಪ್ರಖ್ಯಾತಿ, ಜನರ ನೀತಿ ಜೀವನ—ಇವುಗಳ ಹೊಗಳಿಕೆಯನ್ನು ಯುವಾನನ ಬರೆಹಗಳಲ್ಲಿ ಕಾಣಬಹುದು.

ಇದೇ ಅವಧಿಯ ಉತ್ತರಾರ್ಧದಲ್ಲಿ ರಾಜಪೂತರ ಉಗಮ ಪ್ರಭಾವಗಳು ಕಂಡುಬರುತ್ತವೆ. ಉತ್ತರ ಭಾರತದಲ್ಲಿ ರಾಜಪೂತರು ಪ್ರಬಲರಾದಾಗ ದಕ್ಷಿಣದಲ್ಲಿ ಕಾಂಚೀಪುರದ ಪಲ್ಲವರೂ ತಂಜಾವೂರಿನ ಚೋಳರೂ ಮಧುರೆಯ ಪಾಂಡ್ಯರೂ ಪ್ರಖ್ಯಾತರಾಗಿದ್ದರು. ನಡುವೆ ಕರ್ಣಾಟಕದಲ್ಲಿ ಚಾಲುಕ್ಯರೂ ರಾಷ್ಟ್ರಕೂಟರೂ ಮೆರೆದರು. ಸಮಗ್ರ ಭಾರತಕ್ಕೊಂದೇ ಛತ್ರದ ಆಶ್ರಯವಿದ್ದಿಲ್ಲವಾದರೂ ದೇಶದಲ್ಲಿ ಶಾಂತಿ, ಸಂಪತ್ತುಗಳಿಗೇನೂ ಧಕ್ಕೆ ತಗಲಿರಲಿಲ್ಲ. ಪರದೇಶಗಳೊಡನೆ ವ್ಯಾಪಾರ ಸಂಪರ್ಕಗಳು ಹಿಂದಿಗಿಂತ ಹೆಚ್ಚಾಗಿದ್ದುವು. ರಾಜಾಶ್ರಯದಿಂದ ದೇಶದ ಪ್ರತಿಯೊಂದು ಭಾಗದಲ್ಲೂ ಭವ್ಯವಾದ ದೇವಸ್ಥಾನಗಳು ಸ್ಥಾಪನೆಯಾದುವು; ಪ್ರಾದೇಶಿಕ ಭಾಷೆಗಳಾದ ತಮಿಳು, ಕನ್ನಡಗಳಲ್ಲಿ ಉತ್ತಮ ಸಾಹಿತ್ಯರಚನೆಯಾಯಿತು.

ಎಂಟನೇ ಶತಮಾನದಲ್ಲಿ ಅರಬರು ಜಲಮಾರ್ಗವಾಗಿ ಸಿಂಧೂನದಿಯ ಪ್ರದೇಶಕ್ಕೆ ಬಂದು ತಮ್ಮದೇ ಒಂದು ರಾಜ್ಯವನ್ನು ಸ್ಥಾಪಿಸಿ

ದ್ದರು. ಆದರೆ ಅಲ್ಲಿಂದ ಅವರು ಮುಂದುವರಿಯಲಿಲ್ಲವಾದುದರಿಂದ ಅವರ ಆಗಮನಕ್ಕೆ ಅಷ್ಟೊಂದು ಮಹತ್ವವನ್ನು ಯಾರೂ ಕೊಡುವುದಿಲ್ಲ.

999ನೇ ಇಸವಿಯಲ್ಲಿ ಅಫ್ಘಾನಿಸ್ತಾನದ ಘಜನಿಯ ಮಹಮ್ಮದನೆಂಬ ಮತಾಂಧನು ಭಾರತದ ಪಟ್ಟಣಗಳನ್ನು ಸೂರೆಮಾಡುವುದಕ್ಕೆ ಆರಂಭಿಸಿ ಏಳು ಸಲ ಈ ದೇಶಕ್ಕೆ ತನ್ನ ಸೈನ್ಯದೊಂದಿಗೆ ಬಂದು ನಗರಗಳನ್ನು ಸೂರೆಗೊಂಡು ಅನೇಕ ದೇವಾಲಯಗಳನ್ನು ನೆಲಸಮಮಾಡಿ, ಜನರನ್ನು ಕೊಂದು ಹಲವರನ್ನು ಬಲಾತ್ಕಾರದಿಂದ ತನ್ನ ಮತಕ್ಕೆ ಸೇರಿಸಿ. ಸೆರೆಯಾಳುಗಳಾಗಿ ಒಯ್ದು ತನ್ನ ದುರಭಿಲಾಷೆಯನ್ನು ತಣಿಸಿಕೊಂಡನು. ಸೌರಾಷ್ಟ್ರದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾದ ಸೋಮನಾಥ ದೇವಾಲಯವು ಘಜನಿ ಮಹಮ್ಮದನಿಂದ ಕೆಡಹಲ್ಪಟ್ಟಿದ್ದು ಮೊನ್ನೆ ಮೊನ್ನೆ ಭಾರತವು ಸ್ವತಂತ್ರವಾದ ಅನಂತರ ಸಾರ್ವಜನಿಕರ ವಂತಿಗೆಯಿಂದ ಪುನರ್ನಿರ್ಮಾಣವಾಗಿ ರಾಷ್ಟ್ರಾಧ್ಯಕ್ಷ ಬಾಬು ರಾಜೇಂದ್ರ ಪ್ರಸಾದರ ದಿವ್ಯಹಸ್ತದಿಂದ ಉದ್ಘಾಟಿಸಲ್ಪಟ್ಟಿದೆ.

ಘಜನಿಯ ಮತಾಂಧನು ಬರೀ ದರೋಡೆಖೋರನಾಗಿದ್ದನೇ ಹೊರತು ರಾಜ್ಯಸ್ಥಾಪಕನಾಗಿರಲಿಲ್ಲ. ಅವನ ಅನಂತರ ಆಫ್ಘಾಸಿಸ್ಥಾನದ ಘೋರಿಯ ಮಹಮ್ಮದನು ಭಾರತದ ಪ್ರದೇಶಗಳನ್ನು ಸ್ವಲ್ಪಸ್ವಲ್ಪವಾಗಿ ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಅವನು ಢಿಲ್ಲಿಯಲ್ಲಿ ಗವರ್ನರರನ್ನಾಗಿ ನಿಯಮಿಸಿದ ಅವನ ಆಳುಗಳು ಅವನು ಗತಿಸಿದ ಅನಂತರ ಸ್ವತಂತ್ರರಾದ ಸುಲ್ತಾನರಾದರು. ಢಿಲ್ಲಿಯ ಸುಲ್ತಾನರಾಗಿ ಮೆರೆದವರಲ್ಲಿ ಘೋರಿ ಮಹಮ್ಮದನ ಗುಲಾಮರೇ ಮೊದಲಿಗರು. ಢಿಲ್ಲಿಯನ್ನು ಕೇಂದ್ರವಾಗಿಟ್ಟುಕೊಂಡು ಗುಲಾಮ ವಂಶದ ಸುಲ್ತಾನರೂ ಅನಂತರದ ಇತರ ವಂಶಗಳ ಸುಲ್ತಾನರೂ ಅವರ ಸೇನಾನಿಗಳೂ ಬಂಗಾಳ, ಮಧ್ಯ ಪ್ರದೇಶ, ದಕ್ಷಿಣಗಳಿಗೂ ಹೋಗಿ ಅಲ್ಲಿನ ರಾಜ್ಯಗಳನ್ನೂ ವಶಪಡಿಸಿಕೊಂಡರು. ಕ್ರಮೇಣ ಪ್ರತಿಯೊಂದು ಸ್ಥಳದಲ್ಲೂ ಆರಂಭದಲ್ಲಿ ಗವರ್ನರನಾಗಿ ನೇಮಿಸಲ್ಪಟ್ಟವನು ಸ್ವತಂತ್ರ ಸುಲ್ತಾನನಾದನು. ಸುಲ್ತಾನರ ವಿಜಯದ ಶತಮಾನಗಳಲ್ಲಿ ಹಿಂದೆ ಆರ್ಯ ಅನಾರ್ಯರಲ್ಲಾದಂತೆ ಧ್ವಂಸ ಕಾರ್ಯಗಳೇ ಹೆಚ್ಚಾದುವು. ಸುಲ್ತಾನರ ದಕ್ಷಿಣಾಭಿಮುಖ

ಪ್ರಗತಿಯನ್ನು ತಡೆಗಟ್ಟಿ ದಕ್ಷಿಣ ಭಾರತದ ಸ್ವಾತಂತ್ರ್ಯವನ್ನು ಅನೇಕ ವರ್ಷಕಾಲ ಬಾಳಿಸಿಕೊಂಡುಹೋದ ಕೀರ್ತಿ ಕನ್ನಡನಾಡಿನ ವಿಜಯ ನಗರದ ಅರಸರಿಗೆ ಸಲ್ಲುವುದು.

ಹೀಗೆ ಐದು ಶತಮಾನಗಳ ಕಾಲ ಇಸ್ಲಾಂ ಮತದವರು ಹಿಂದೂ ರಾಜ್ಯಗಳನ್ನು ಕಿತ್ತುಕೊಂಡರು. 1526ರ ಅನಂತರ ಒಬ್ಬ ಮುಸ್ಲಿಮನು ಇನ್ನೊಬ್ಬನನ್ನು ಹೊರದೂಡಲು ಆರಂಭವಾಯಿತು. ಮಧ್ಯ ಆಸ್ಯದ ಭಾಗದಿಂದ ತಲೆತಪ್ಪಿಸಿಕೊಂಡು ಹೊರಟ ಬಾಬರನೆಂಬ ಮೊಗಲ ಸೇನಾನಿ ಅಫ್ಘಾನಿಸ್ತಾನವನ್ನು ಗೆದ್ದು ಅನಂತರ 1526ರಲ್ಲಿ ಢಿಲ್ಲಿಯ ಸುಲ್ತಾನನನ್ನು ಯುದ್ಧದಲ್ಲಿ ಸೋಲಿಸಿ ತನ್ನ ರಾಜ್ಯವನ್ನು ಸ್ಥಾಪಿಸಿದನು. ಬಾಬರನ ಮಗನಾದ ಹೂಮಾಯೂನನನ್ನು ಹಿಂದಿನ ಸುಲ್ತಾನರ ಕಡೆಯವರು ಓಡಿಸಿ ಸ್ವಲ್ಪ ಸಮಯ ಬೇರೊಬ್ಬ ಸುಲ್ತಾನನೇ ಢಿಲ್ಲಿಯ ಪಟ್ಟವೇರಿದರೂ ಹುಮಾಯೂನನು ತಿರುಗಿ ಬಂದು ಢಿಲ್ಲಿಯನ್ನು ವಶಪಡಿಸಿಕೊಂಡನು.

ಬಾಬರನ ಮೊಮ್ಮಗನಾದ ಅಕ್ಬರನು 1560ರಿಂದ 1605ರ ವರೆಗೆ ಸುಮಾರು ಅರ್ಧ ಶತಮಾನದ ಕಾಲ ರಾಜ್ಯಭಾರ ನಡೆಸಿ ಮೊಗಲ ಸಾಮ್ರಾಜ್ಯದ ವಿಸ್ತಾರಕ್ಕೂ ಘನತೆಗೂ ಕಾರಣನಾದನು. ಮಾಲವ, ದಕ್ಷಿಣದ ಒಂದು ಭಾಗ, ರಾಜಸ್ಥಾನ, ಗುಜರಾತು, ಬಂಗಾಳಗಳೆಲ್ಲ ಢಿಲ್ಲಿಯ ಅಧೀನವಾದುವು. ಹೀಗೆ ಸಾಮ್ರಾಜ್ಯ ಕಟ್ಟುವಾಗ ಹಿಂದೂ ಅರಸರೂ ಮುಸ್ಲಿಮ್ ಸುಲ್ತಾನರೂ ಅಕ್ಬರನ ಸಾಮ್ರಾಜ್ಯಲಾಲಸೆಗೆ ಬಲಿಬಿದ್ದುದರಿಂದ ಧರ್ಮದ ಹೆಸರಲ್ಲಿ ಯುದ್ಧವಾಗುವುದು ಕಡಿಮೆಯಾಯಿತು. ಮಾತ್ರವಲ್ಲ, ಅಕ್ಬರನ ಸೈನ್ಯದಲ್ಲೂ ಆಸ್ಥಾನದಲ್ಲೂ ಮುಸ್ಲಿಮೇತರರೂ ಸೇರಿಸಲ್ಪಟ್ಟು ಹಿಂದುಗಳು ಹಿಂದುಗಳೆದುರು, ಮುಸ್ಲಿಮರು ಮುಸ್ಲಿಮರೆದುರು, ಹಿಂದುಗಳು ಮುಸ್ಲಿಮರೆದುರು ನಿಂತು ಕಾದಬೇಕಾಯಿತು. ಅಕ್ಬರನು ಹಿಂದೂ ಮತದ ಮೇಲೆ ಅಭಿಮಾನವಿದ್ದವನಾಗಿದ್ದು ಹಿಂದು ಮುಸ್ಲಿಮ್ ಎಂಬ ಕಲಹ ಅಳಿದರೆ ದೇಶದ ಭದ್ರತೆಯೂ ಪ್ರಗತಿಯೂ ಶಾಶ್ವತವಾಗುವುದೆಂದು ಹಿಂದೂ ಮುಸ್ಲಿಮ್ ಮೈತ್ರಿಗಾಗಿ ಕಾರ್ಯಕ್ರಮ ಕೈಕೊಂಡಿದ್ದನು.

ಅಕ್ಬರನ ಮೊಮ್ಮಗನಾದ ಷಾಜಹಾನನು ತನ್ನ ಮಡದಿ ಮುಮ್ತಾಜ ಮಹಲಳ ನೆನಪಿಗಾಗಿ ಕಟ್ಟಿದ ಗೋರಿಯು ಜಗತ್ತಿನ ಅತಿ ಸುಂದರ ಶಿಲ್ಪ

ಕೃತಿಗಳಲ್ಲೊಂದಾದ ತಾಜಮಹಲ್ ಎಂದು ಖ್ಯಾತಿಗೊಂಡಿರುವುದರಿಂದ ಅವನ ಹೆಸರೂ ಶಾಶ್ವತವಾಗಿದೆ. ಷಾಜಹಾನನ ಮಗ ಔರಂಗಜೇಬನು ಮುತ್ತಜ್ಜ ಅಕ್ಬರನ ಮಾರ್ಗವನ್ನು ಬಿಟ್ಟು ತನ್ನ ಬಂಧುಗಳನ್ನೇ ಕೊಂದು ಪಟ್ಟವೇರಿ ಧರ್ಮಾಂಧತೆಯನ್ನು ತಿರುಗಿ ಬಲವಾಗಿಸುವ ಯತ್ನಮಾಡಿದನು. ಇದರಿಂದಾಗಿ ಪಂಜಾಬಿನ ಸಿಕ್ಖರೂ, ದಕ್ಷಣದಲ್ಲಿ ಶಿವಾಜಿಯ ನೇತೃತ್ವದಲ್ಲಿ ಮರಾಠರೂ ಪ್ರಬಲರಾಗಿ ಔರಂಗಜೇಬನ ಅಧಃಪತನಕ್ಕೆ ಕಾರಣರಾದರು.

ಔರಂಗಜೇಬನ ಕಾಲದಲ್ಲೇ ಶಿವಾಜಿಯು ಸ್ವತಂತ್ರ ಮಹಾರಾಷ್ಟ್ರವನ್ನು ಸ್ಥಾಪಿಸಿ ಛತ್ರಪತಿ ಎಂಬ ಬಿರುದನ್ನು ಪಡೆದನು. ಅವನ ಅನಂತರ ಮರಾಠರು ಪೇಶ್ವೆಯವರ (ಅರಸನ ಮಂತ್ರಿಗಳು) ನೇತೃತ್ವದಲ್ಲಿ ಪುಣೆ, ಬಡೋದೆ, ಗ್ವಾಲಿಯರ್, ಇಂದೋರ್, ನಾಗಪುರ, ತಂಜಾವೂರುಗಳಲ್ಲಿ ಸಹ ಪ್ರಬಲ ಮಹಾರಾಷ್ಟ್ರ ಮನೆತನಗಳನ್ನು ಸ್ಥಾಪಿಸಿ ಮರಾಠರ ಸಾಮ್ರಾಜ್ಯದ ಉನ್ನತಿಗೆ ಕಾರಣರಾದರು. ಪಂಜಾಬಿನಲ್ಲಿ ಸಿಕ್ಖರ ಪ್ರಾಬಲ್ಯವೂ ಹೆಚ್ಚಿತು. ಮೊಗಲ ವಂಶಜರು ಹೆಸರಿಗೆ ಮಾತ್ರ ಇನ್ನೂ ಢಿಲ್ಲಿಯ ಬಾದಶಹರೆಂದು ಕರೆಯಲ್ಪಟ್ಟಿದ್ದರೂ ಬಂಗಾಳ, ಗುಜರಾತುಗಳಲ್ಲಿಯೂ, ದಕ್ಷಿಣದ ಆರ್ಕಾಟು, ಹೈದರಾಬಾದುಗಳಲ್ಲಿಯೂ ಸ್ವತಂತ್ರ ನವಾಬರೂ, ಇತರ ಭಾಗಗಳಲ್ಲಿ ಸ್ವತಂತ್ರ ಹಿಂದೂ ಅರಸರೂ ಶಾಸನಮಾಡುತ್ತಿದ್ದರು. ಆದುದರಿಂದ ಮೊಗಲರ ಕೈಯಿಂದ ಅಧಿಕಾರವು ಬ್ರಿಟಿಷರ ವಶವಾಯಿತೆಂದು ಹೇಳುವ ಬದಲು ಆಯಾ ಪ್ರದೇಶದ ಮತ್ತೂ ಮುಖ್ಯವಾಗಿ ಮರಾಠರ ವಶವಾಯಿತೆಂದರೆ ಸರಿಯಾಗುವುದು.

ಢಿಲ್ಲಿಯಲ್ಲಿ ಸುಲ್ತಾನರೇ ಆಳುತಿದ್ದಾಗ ಪೋರ್ಚುಗೀಸ ನಾವಿಕ ವಾಸ್ಕೋಡಾಗಾಮನು ಆಫ್ರಿಕದ ತೀರವನ್ನು ಸುತ್ತಿಕೊಂಡು ಜಲಮಾರ್ಗದಲ್ಲೇ ಭಾರತದ ಪಶ್ಚಿಮ ತೀರದ ಕಲ್ಲಿಕೋಟೆಗೆ 1492ನೇ ಇಸವಿಯಲ್ಲಿ ತಲ್ಪಿದ್ದನು. ವಾಸ್ಕೋಡಾಗಾಮನ ದಾರಿಯಲ್ಲೇ ಇತರ ಪೋರ್ಚುಗೀಸರು ಬಂದು ವ್ಯಾಪಾರಕ್ಕಾಗಿ ಅಲ್ಲಲ್ಲಿ ಬಂದರುಗಳಲ್ಲಿ ಬೀಡುಬಿಟ್ಟು ಗೋವೆಯನ್ನು ವಶಪಡಿಸಿಕೊಂಡು ಅದನ್ನು ತಮ್ಮ ಮುಖ್ಯಸ್ಥಳವಾಗಿಟ್ಟುಕೊಂಡು ಇಂದಿಗೂ ಆಳುತ್ತ ಬಂದಿದಾರೆ.

ಹದಿನಾರನೇ ಶತಮಾನದಲ್ಲಿ ಢಿಲ್ಲಿಯ ಬಾದಶಹರ ಕಾಲದಲ್ಲಿ ಡಚ್ಚರೂ ಫ್ರೆಂಚರೂ ಇಂಗ್ಲೀಷರೂ ಬರಲಾರಂಭಿಸಿದರು. ಡಚ್ಚರು ಭಾರತಕ್ಕಿಂತ ಸುಮಾತ್ರಾ, ಜಾವಾ, ಬೋರ್ನಿಯೋಗಳೆಂಬ ಆಗ್ನೇಯ ದ್ವೀಪಗಳ ಮೇಲೆ ದೃಷ್ಟಿಯಿಟ್ಟರು. ಫ್ರೆಂಚರೂ ಇಂಗ್ಲೀಷರೂ ಆರಂಭ ದಲ್ಲಿ ಬಂದರು ಸ್ಥಳಗಳಲ್ಲಿ ತಮ್ಮ ವ್ಯಾಪಾರಕ್ಕಾಗಿ ಕಾರ್ಖಾನೆಗಳನ್ನು ಸ್ಥಾಪಿಸಿ, ಅವುಗಳ ಭದ್ರತೆಗೆಂದು ಕೋಟೆಗಳನ್ನು ಕಟ್ಟಿ, ಕ್ರಮೇಣ ಇಲ್ಲಿನ ಹತ್ತಾರು ರಾಜ್ಯಗಳೊಳಗೆ ಸಹಜವಾಗಿ ಕಂಡುಬರುತ್ತಿದ್ದ ಒಳ ಜಗಳಗಳಲ್ಲಿ ಕೈಹಾಕಿ ಒಮ್ಮೆ ಈಕಡೆ, ಇನ್ನೊಮ್ಮೆ ಆಕಡೆ ಸೇರಿ ತಮ್ಮದೇ ರಾಜ್ಯವನ್ನು ಸ್ಥಾಪಿಸಿದರು. ಫ್ರೆಂಚರೂ ಬ್ರಿಟಿಷರೂ ತಮ್ಮತಮ್ಮೊಳಗೆ ಜಗಳಾಡಿ ಬ್ರಿಟಿಷರ ಕೈಯೇ ಮೇಲಾಗಲು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪಿಸುವ ಅವಕಾಶವು ಬ್ರಿಟಿಷರಿಗೆ ಮಾತ್ರ ಸಿಕ್ಕಿತು. ಫ್ರೆಂಚರು ಪುದುಚೇರಿ ಎಂಬ ತಮ್ಮ ಅಂದಿನ ರಾಜಧಾನಿಯನ್ನು ಇನ್ನೂ ತಮ್ಮ ಅಂಕೆಯಲ್ಲಿಟ್ಟು ಕೊಂಡಿದ್ದಾರೆ.

1757ರಿಂದ 1857ರ ವರೆಗಿನ ಒಂದು ಶತಮಾನದ ಅವಧಿಯಲ್ಲಿ ಬ್ರಿಟಿಷರು ಸಮಗ್ರ ಭಾರತವನ್ನು ವಶಪಡಿಸಿಕೊಂಡರು; ಮೂರರಲ್ಲಿ ಎರಡು ಪಾಲಿನಷ್ಟು ಭಾಗಗಳನ್ನು ಬ್ರಿಟಿಷ್ ಸರಕಾರವೇ ನೇಮಿಸಿದ ಗವರ್ನರ್ ಜನರಲ್ ಮತ್ತು ಗವರ್ನರರ ಮೂಲಕ ಆಳುತ್ತಿದ್ದರು. ಉಳಿದೊಂದು ಪಾಲನ್ನು ಅದರ ಅಧೀನರಾಗಿರಲೊಪ್ಪಿದ ಭಾರತದ ರಾಜರು ಆಳುತ್ತಿದ್ದರು.

ಬ್ರಿಟಿಷ್ ಸಾಮ್ರಾಜ್ಯದ ವಿಸ್ತಾರವಾಗಲೀ ಅದರ ಆಳ್ವಿಕೆಯ ರೀತಿ ನೀತಿಗಳಾಗಲೀ ಐದು ವರ್ಷಕ್ಕೊಮ್ಮೆ ವರ್ಗವಾಗುತ್ತಿದ್ದ ಗವರ್ನರ್ ಜನರಲ್ ಮತ್ತು ಗವರ್ನರರ ಮೇಲೆ ಹೊಂದಿಲ್ಲದೆ ಬ್ರಿಟಿಷ್ ಮಂತ್ರಿ ಮಂಡಳವು ಹಾಕಿಕೊಟ್ಟ ಗೆರೆಗಳ ಮೇಲೆಯೇ ನಡೆಯುತ್ತಿದ್ದುದರಿಂದ ಯಾವಾಗ ಯಾವ ಗವರ್ನರ್ ಜನರಲನಿದ್ದನು ಎಂದು ನೆನಪಿಟ್ಟು ಕೊಳ್ಳುವ ಅವಶ್ಯವಿಲ್ಲ. ಪರದೇಶಗಳೊಡನೆ ವರ್ತಿಸಬೇಕಾದ ಧೋರಣೆಯ ಕುರಿತು ಬ್ರಿಟಿಷರ ರಾಜಕೀಯ ಪಕ್ಷಗಳೊಳಗೂ ಒಂದೇ ರೀತಿಯ ಒಪ್ಪಂದವಿರುವುದರಿಂದ ಅಲ್ಲಿನ ಮಂತ್ರಿಮಂಡಳ ಬೇರೆಯಾದಾಗಲೂ ಭಾರತದ ಆಡಳಿತೆಯ ಕ್ರಮದಲ್ಲಿ ವಿಶೇಷ ಬದಲಾವಣೆಗಳಾಗಲಿಲ್ಲ.

ಬ್ರಿಟಿಷರ ಆಳ್ವಿಕೆಯಿಂದ ಸಮಗ್ರ ಭಾರತದಲ್ಲಿ ಒಂದೇ ರೀತಿಯ ಕಾನೂನುಗಳು ಅನುಸರಿಸಲ್ಪಟ್ಟವು. ಬ್ರಿಟಿಷರ ರೀತಿಯಲ್ಲಿ ಸರಕಾರದ ವ್ಯವಹಾರ, ಕೋರ್ಟುಗಳ ವ್ಯವಹರಣೆ ಮತ್ತು ನ್ಯಾಯ ತೀರ್ಮಾನಗಳಾದುವು. ಬ್ರಿಟಿಷರ ಇಂಗ್ಲೀಷು ಭಾಷೆಗೆ ಪ್ರಾಧಾನ್ಯ, ಬ್ರಿಟಿಷರಿಗೇ ಮೇಲಂತಸ್ತಿನ ಹುದ್ದೆಗಳು ಸಿಕ್ಕುವಂತಾಯಿತು. ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ರಾಜ್ಯಪಾಲಕರಾದ ಮೇಲೂ ವ್ಯಾಪಾರೀ ದೃಷ್ಟಿಯನ್ನು ಬಿಡಲಿಲ್ಲ. ರೈಲುಗಳ ನಿರ್ಮಾಣದಲ್ಲಿ ಬ್ರಿಟಿಷರ ವ್ಯಾಪಾರದ ಅನುಕೂಲತೆಗಳಿಗೂ ಸೈನ್ಯದ ಚಲಾವಣೆಗಳಿಗೂ ವಿಶೇಷ ಗಮನ ಕೊಡುವುದು; ಬ್ರಿಟಿಷರ ಕಾರ್ಖಾನೆಗಳಲ್ಲಿ ಉತ್ಪಾದಿಸಲ್ಪಟ್ಟ ಸರಕುಗಳಿಗೆ ಭಾರತದಲ್ಲಿ ಪ್ರಚಾರ ಸಿಕ್ಕುವಂತೆ ಇಲ್ಲಿನ ತೆರಿಗೆ, ಸುಂಕಗಳನ್ನು ಬದಲಾಯಿಸುವುದು; ಅವರ ಕಾರ್ಖಾನೆಗಳಿಗೆ ಬೇಕಾದ ಕಚ್ಚಾ ಸಾಮಾನುಗಳ ಉತ್ಪಾದನೆ ಇಲ್ಲಿ ಹೆಚ್ಚುವಂತೆ ಪ್ರೋತ್ಸಾಹಿಸುವುದು — ಇದೇ ಅವರ ಧೋರಣೆಯಾಯಿತು. ದಿನದಿಂದ ದಿನಕ್ಕೆ ಭಾರತದ ದಾರಿದ್ರ್ಯ ಹೆಚ್ಚಿತು, ರಾಜಕೀಯ ಸಾಂಸ್ಕೃತಿಕ ಪಾರತಂತ್ರ್ಯವು ಹೆಚ್ಚಿತು.

ಭಾರತವನ್ನು ಬ್ರಿಟಿಷರ ಕೈಯಿಂದ ವಿಮುಕ್ತಗೊಳಿಸುವ ಯತ್ನ 1857ರಲ್ಲೇ ಆರಂಭವಾಯಿತೆನ್ನಬಹುದು. ಉತ್ತರ ಭಾರತದ ಹಲವೆಡೆಗಳಲ್ಲಿ ಭಾರತದ ಸೇನೆಗಳು ದಂಗೆಯೆದ್ದು ಬ್ರಿಟಿಷ್ ಆಫೀಸರರಿಗೆ ಗುಂಡಿಕ್ಕಿ ಪಟ್ಟಣಗಳನ್ನು ವಶಪಡಿಸಿಕೊಂಡು ಒಮ್ಮೆಗೆ ಬ್ರಿಟಿಷ್ ಗದ್ದುಗೆಯನ್ನು ಅಲುಗಾಡಿಸಿಬಿಟ್ಟವು. ಆದರೆ ದಕ್ಷಿಣದಲ್ಲೂ ಅದೇ ರೀತಿಯಾಗಲಿಲ್ಲ, ಹೈದರಾಬಾದಿನ ನಿಜಾಮನೂ ಪಂಜಾಬದ ಸಿಕ್ಖರೂ ಬ್ರಿಟಿಷರಿಗೆ ಸಹಾಯ ಕೊಟ್ಟರು. ಜನಸಮುದಾಯವು ಈ ಕ್ರಾಂತಿಯಲ್ಲಿ ಭಾಗವಹಿಸಲಿಲ್ಲ. ಹಾಗಾಗಿ ಸೈನಿಕರ ದಂಗೆಯನ್ನು ಅಣಗಿಸಿ ಬ್ರಿಟಿಷರಿಗೆ ವಿರುದ್ಧವಾಗಿದ್ದರೆಂಬ ಸಂಶಯದಿಂದಲೇ ಸಾವಿರಗಟ್ಟಲೆ ಜನರನ್ನು ಕಠಿಣ ಶಿಕ್ಷೆಹಿಂಸೆಗಳಿಗೆ ಗುರಿಪಡಿಸಲಾಯಿತು.

1885ರಲ್ಲಿ ನೇಶನಲ್ ಕಾಂಗ್ರೆಸನ್ನು ಕೆಲಮಂದಿ ಭಾರತೀಯರೂ ಬ್ರಿಟಿಷರೂ ಸೇರಿ ಸ್ಥಾಪಿಸಿದರು. ಪ್ರಜೆಗಳ ಕೇಳಿಕೆಗಳನ್ನು ಆಳುವವರೆದುರು ಮುಂಡಿಸಿ ತಕ್ಕ ಪರಿಹಾರ ಪಡೆಯುವ ಉದ್ದೇಶದಿಂದ

ಹೊರಟ ಸಂಸ್ಥೆ ದಾದಾಭಾಯಿ ನೌರೋಜಿಯಂಥವರ ಕಾಲದಲ್ಲಿ ಸರಕಾರವನ್ನು ಕಟುವಾಗಿ ಟೀಕಿಸಲಾರಂಭಿಸಿತು. ಲೋಕಮಾನ್ಯ ತಿಲಕರಂಥವರ ನೇತೃತ್ವದಲ್ಲಿ ಉಗ್ರಬೋಧನೆಯನ್ನೂ ಸಾರಿತು; 1921ರಲ್ಲಿ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಅಹಿಂಸಾತ್ಮಕ ಚಳವಳಿಗಳನ್ನು ಹೂಡಲಾರಂಭಿಸಿ ಜನರಿಗೆ ಬ್ರಿಟಿಷ್ ಸರಕಾರದ ಮೇಲಿದ್ದ ಅಭಿಮಾನ ಕುಗ್ಗುವಂತೆ ಮಾಡಿತು. ಸರಕಾರದ ಪ್ರತಿಷ್ಠೆಯು ಕಡಿಮೆಯಾಗಿ ಅದಕ್ಕೆ ಜನರ ಮೇಲಿನ ಹಿಡಿತವು ಕಡಿಮೆಯಾಯಿತು. ಕ್ರಮಬದ್ಧ ರೀತಿಯಲ್ಲಿ ಕಾಂಗ್ರೆಸಿನ ನೇತೃತ್ವದಲ್ಲಿ ಚಳವಳವು — ಮುಖ್ಯವಾಗಿ 1942ರಲ್ಲಾರಂಭಿಸಿದ ಭಾರತದಿಂದ ತೊಲಗಿರಿ ಎಂಬ ಚಳವಳವು–ಬಹಿರಂಗ ರೀತಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯಾಧಿಕಾರದ ಮೇಲೆ ನೂತನ ರೀತಿಯ ಯುದ್ಧವೇ ಆಗಿ ನಡೆಸಲ್ಪಡುತ್ತಿದ್ದಾಗ ಆರಂಭದಿಂದಲೂ ಅಲ್ಲಲ್ಲಿ ಕೆಲವು ಗುಪ್ತದಳಗಳು ಹಿಂಸಾವಾದವನ್ನೂ ಕೈಕೊಂಡು ಬ್ರಿಟಿಷ್ ಆಫೀಸರರನ್ನು ಕೊಲ್ಲುವುದು ಬ್ರಿಟಿಷ್ ಕಾರ್ಖಾನೆಗಳ ಸುಲಿಗೆ ಮಾಡುವುದು — ಇಂಥ ಕೆಲಸಗಳನ್ನೂ ಕೈಗೊಂಡಿದ್ದುವು; ಆದರೆ ಅವುಗಳು ವಿಶೇಷ ಪರಿಣಾಮಕಾರಿಗಳಾಗಲಿಲ್ಲ. ಎರಡನೇ ಜಾಗತಿಕ ಯುದ್ಧದಲ್ಲಿ ಬರ್ಮಕ್ಕೆ ಹೋಗಿ ಜಪಾನಿಗಳ ಕೈವಶರಾದ ಭಾರತದ ಸೈನಿಕರು ಸುಭಾಶಚಂದ್ರ ಬೋಸರ ನೇತೃತ್ವದಲ್ಲಿ ಇಂಡಿಯನ್ ನೇಶನಲ್ ಆರ್ಮಿಯೆಂದು ಭಾರತದ ವಿಮೋಚನೆಗೆಂದು ಇತ್ತ ಧಾವಿಸಿದರು. ಬ್ರಿಟಿಷ್ ಸೈನ್ಯವನ್ನು ಅವರಿಂದ ಸೋಲಿಸಲಾಗದಿದ್ದರೂ ಭಾರತದ ಸೈನಿಕರು ಇನ್ನು ಮುಂದೆ ತಮ್ಮ ಗುಲಾಮರಾಗಿ ಉಳಿಯಲಿಕ್ಕಿಲ್ಲ, ಅವರಲ್ಲೂ ದೇಶಪ್ರೇಮ ಮೊಳೆತಿದೆ ಎಂದು ಬ್ರಿಟಿಷ್ ಸರಕಾರಕ್ಕೆ ತಿಳಿದು ಅದಕ್ಕೆ ತನ್ನ ದೃಢತೆಯ ಕುರಿತು ಸಂಶಯವಾಗಿರಬೇಕು.

ಹೀಗೆ ಎಲ್ಲ ಕಡೆಗಳ ಒತ್ತಾಯದಿಂದಾಗಿ ಬ್ರಿಟಿಷರು ಭಾರತವನ್ನು ಬಿಟ್ಟು ಇಲ್ಲಿನವರಿನ್ನುಮುಂದೆ ಸ್ವತಂತ್ರರೆಂದು ಒಪ್ಪಿಕೊಂಡರು. ಹೀಗೆ ಮಾಡುವ ಮೊದಲೇ ಇಲ್ಲಿನ ಮುಂದಾಳುಗಳೊಡನೆ ಒಪ್ಪಂದಮಾಡಿ ಪಾಕಿಸ್ತಾನವೆಂಬ ಅಂಶವನ್ನು ಬೇರ್ಪಡಿಸಿ ಬೇರೊಂದು ಸ್ವತಂತ್ರರಾಷ್ಟ್ರವನ್ನು ಭಾರತದ ಎರಡೂ ಬದಿಗಳಲ್ಲಿರುವಂತೆ ಸ್ಥಾಪಿಸಿದರು.

# ೪. ಸಾಹಿತ್ಯ ದರ್ಶನ

ಶಿಲಾಶಾಸನಗಳು ಚಿರಸ್ಥಾಯಿಗಳು; ಆಡಿದ ಮಾತಾಗಲೀ ಹಾಡಿದ ರಾಗವಾಗಲೀ ಅರೆನಿಮಿಷದಲ್ಲಿ ಮಾಯವಾಗುವುದೆಂದು ಹೇಳುವುದು ರೂಢಿ. ವಿಚಾರಿಸಿ ನೋಡಿದರೆ ಆಡಿದ ಮಾತುಗಳಲ್ಲೂ ಹಾಡಿದ ರಾಗದಲ್ಲೂ ವ್ಯಕ್ತಿಯ ಅಂತರ್ಯವು ಅಡಕವಾಗಿದ್ದರೆ ಅವು ಬಾಳಿಬಂದಷ್ಟು ಶಿಲೆ ಕಲ್ಲಿನ ಕಟ್ಟಡಗಳು ಸಹ ನಿಲ್ಲಲಾರವೆಂದು ಅನೇಕ ನಿದರ್ಶನಗಳಿಂದ ಖಚಿತಪಡಿಸಬಹುದು.

ಭಾರತೀಯರ ಚತುರ್ವೇದಗಳ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಜಗತ್ತಿನ ಯಾವ ಸಾಹಿತ್ಯದಲ್ಲೂ ವೇದಗಳಷ್ಟು ಪ್ರಾಚೀನ ಕವನಗಳು ಇಲ್ಲವೆಂದೇ ಹೇಳಬಹುದು. ವೇದಗಳು ಬರೆದಿಟ್ಟ ಕಾಲಕ್ಕಿಂತ ಅನೇಕ ವರ್ಷಗಳ ಹಿಂದೆಯೇ ಬರೆದ ಗ್ರಂಥಗಳು ಬೇರೆ ದೇಶಗಳಲ್ಲಿದ್ದಾವೆ; ಆದರೆ ವೇದಗಳು ರಚಿಸಲ್ಪಟ್ಟ ಯುಗಕ್ಕಿಂತ ಹಿಂದೆ ರಚಿತವಾದ ಯಾವ ಗ್ರಂಥವೂ ಎಲ್ಲಿಯೂ ಇಷ್ಟರವರೆಗೆ ಸಿಕ್ಕಿದ್ದಿಲ್ಲ. ಕಡಿಮೆಯೆಂದರೆ 5,000 ವರ್ಷಗಳಿಗಿಂತ ಹಿಂದೆ ಆರ್ಯರು ತಮ್ಮ ದೇವತೆಗಳನ್ನು ಪೂಜಿಸಲು, ತಾವು ಕಂಡ ಸೃಷ್ಟಿ ವೈಚಿತ್ರ್ಯಗಳನ್ನು ವರ್ಣಿಸಲು, ಅವುಗಳುಂಟಾಗಲಿಕ್ಕೆ ಕಾರಣಗಳನ್ನು ವಿವರಿಸಲು ಕವನಗಳನ್ನು ರಚಿಸಿದರು. ಈ ಕವನಗಳ ಉದಾತ್ತಭಾವನೆಗಳೂ ಎದೆಮಿಡಿಯುವ ಇಂಪೂ ಕೇಳಿದವರಿಗೆ ಅತಿಮಾನುಷ ಸೌಂದರ್ಯದ ಅನುಭವವನ್ನು ಕೊಟ್ಟುದರಿಂದ ಆ ಕವನಗಳು ಮಾನವ ನಿರ್ಮಿತವೆನ್ನುವ ಬದಲು ದೇವತೆಗಳೇ ಕವಿಗಳ ಮುಖದಿಂದ ಹಾಡಿಸಿದರೆಂದು ಜನರು ನಂಬಿ ಬಂದರು. ವೇದದ ಋಕ್ಕುಗಳನ್ನು ರಚಿಸಿದವರು, ಪದ್ಯನಿರ್ಮಾತೃಗಳೂ ಉದಾತ್ತಬೋಧಕರೂ ಋಷಿಗಳೂ ಆಗಿದ್ದುದರಿಂದ ಪದ್ಯವನ್ನು ರಚಿಸುವವನಿಗೂ ಇತರರು ಕಾಣದ ತತ್ವಗಳನ್ನು ಕಂಡು ಬೋಧಿಸುವವನಿಗೂ ಸಂಸ್ಕೃತದಲ್ಲಿ ಕವಿ ಎಂದು ಹೆಸರು.

ವೇದಗಳ ಋಕ್ಕು ಅಥವ ಮಂತ್ರಗಳನ್ನು ಪ್ರತಿಯೊಂದು ಮನೆಯ



ಕವೀಂದ್ರ ರವೀಂದ್ರರು

ವರೂ ಪಠಿಸುತ್ತಿದ್ದರು, ಪ್ರತಿಯೊಬ್ಬ ಆರ್ಯ ಬಾಲಕನು ಅವುಗಳನ್ನು ಮುಖೋದ್ಗತ ಮಾಡಬೇಕಿತ್ತು. ತಂದೆಯಿಂದ ಮಗ, ಮಗನಿಂದ ಮೊಮ್ಮಗ ಹೀಗೆ ನೂರಾರು ತಲೆಮಾರುಗಳ ವರೆಗೆ ವೇದಮಂತ್ರಗಳನ್ನು ಒಂದೇ ಒಂದು ಅಕ್ಷರದಲ್ಲಾಗಲೀ ಸ್ವರಭಾರದಲ್ಲಾಗಲೀ ವ್ಯತ್ಯಾಸವಾಗದಂತೆ ಪಠಿಸುತ್ತಿದ್ದುದರಿಂದ ಅವು ಏಕರೀತಿಯಲ್ಲಿ ಉಳಿದುಬಂದುವು. ಕಾಲಕ್ರಮೇಣ ಋಕ್ಕುಗಳ ಸಂಖ್ಯಾಬಾಹುಲ್ಯದಿಂದ ಎಲ್ಲರೂ ಎಲ್ಲವನ್ನೂ ಕಲಿಯುವುದು ಕಷ್ಟವಾದಾಗ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂಬ ನಾಲ್ಕು ವಿಭಾಗಗಳು ಮಾಡಲ್ಪಟ್ಟುವು. ಕೃಷ್ಣ ದ್ವೈಪಾಯನ (ದ್ವೀಪವಾಸೀ ಕೃಷ್ಣ)ನೆಂಬವನು ಈ ವ್ಯವಸ್ಥೆ ಮಾಡಿದುದರಿಂದ ಅವನನ್ನು ವೇದವ್ಯಾಸನೆಂದು ಕರೆಯುತ್ತಾರೆ. ಕೆಲವು ಋಷಿಗಳ ವಂಶದವರು ಋಗ್ವೇದವನ್ನೂ ಇನ್ನು ಕೆಲವರು ಯಜುರ್ವೇದವನ್ನೂ ಕಲಿಯುತ್ತ ಬಂದು ಋಗ್ವೇದಿಗಳೂ ಯಜುರ್ವೇದಿಗಳೂ ಎಂದು ಕರೆಯಲ್ಪಟ್ಟರು. ಎರಡು ವೇದಗಳನ್ನು ಕಲಿತವರು ದ್ವಿವೇದಿಗಳೆಂದೂ ಮೂರು ವೇದಗಳನ್ನು ಕಲಿತವರು ತ್ರಿವೇದಿಗಳೆಂದೂ ಎನಿಸಿದರು.

ವೇದಮಂತ್ರಗಳನ್ನು ಸರಿಯಾಗಿ ಪಠಿಸಿದರೆ ಅವುಗಳ ಅರ್ಥವನ್ನು ತಿಳಿದರೆ, ಆರ್ಯಮತದಲ್ಲಿ ನಂಬುಗೆಯಿಲ್ಲದವರೂ ಅವುಗಳ ಇಂಪು, ಉಪಮೆ, ಕವಿಚಮತ್ಕಾರಗಳಿಂದ ಮುಗ್ಧರಾಗಬೇಕಾಗುವುದು. ಬರೇ ಭಾಷಾಂತರದಲ್ಲಿ ಮೂಲದ ಸೌಂದರ್ಯ ಅರ್ಧದಷ್ಟು ಕಳೆದುಹೋದರೂ ಅರುಣೋದಯ, ಅಸ್ತಮಾನ, ಗುಡುಗುಮಿಂಚು, ನದಿಸಮುದ್ರ, ಅರಣ್ಯ, ಜೀವನ ಮರಣ, ವಿದ್ಯಾರಂಭ, ವಿವಾಹ—ಮೊದಲಾದುವುಗಳ ಕುರಿತು ಆರ್ಯರಲ್ಲಿದ್ದ ಭಾವನೆ, ಕಲ್ಪನೆಗಳನ್ನು ಕಾಣುವಾಗ ಎಲ್ಲೆಲ್ಲಿಯೂ ಪರಮಾತ್ಮನ ಮಹಿಮೆಯನ್ನು ಅವರು ಕಂಡಂತೆ ಓದುಗರು ಸಹ ಒಂದು ಕ್ಷಣಕ್ಕಾದರೂ ಕಂಡುಕೊಂಡು ಮೈಮರೆಯುವಂತಾಗುವುದು.

ವೇದಕಾಲವು ಕಳೆದ ಅನೇಕ ವರ್ಷಗಳ ತರುವಾಯ ವೇದದ ಭಾಷೆಯೇ ರೂಢಿಯಲ್ಲಿಲ್ಲದೆ ಹೋದುದರಿಂದ ವೇದಗಳನ್ನು ಅರ್ಥಮಾಡುವವರ ಅನುಕೂಲತೆಗಾಗಿ ನಿರುಕ್ತ (ವೇದ ಭಾಷೆಯ ಅರ್ಥ) ವ್ಯಾಕರಣ, ಛಂದಸ್ಸುಗಳೆಂಬ ವೇದಾಂಗಗಳನ್ನು ಸಹಜವಾಗಿ ಕಲಿಯಬೇಕಾಗಿ ಬಂತು.

ಯಾಸ್ಕನ ನಿರುಕ್ತ, ಪಾಣಿನಿಯ ವ್ಯಾಕರಣಗಳು ಸುಲಭದಲ್ಲಿ ಬಾಯಿಪಾಠವಾಗುವಂತೆ ಸಂಕ್ಷಿಪ್ತವಾದ ವಾಕ್ಯಗಳಲ್ಲಿದ್ದು ಸೂತ್ರಗಳೆಂದು ಕರೆಯಲ್ಪಡುತ್ತವೆ. ಸೂತ್ರಗಳನ್ನು ಸುಲಭದಲ್ಲಿ ಕಂಠಪಾಟಮಾಡಬಹುದಾದರೂ ಅವುಗಳ ಅರ್ಥ ತಿಳಿಯಬೇಕಾದರೆ ಅವುಗಳ ವಿವರವನ್ನು ಅಧ್ಯಾಪಕನಾಗಲೀ ಟೀಕೆಯಾಗಲೀ ಕೊಡಬೇಕು. ಸೂತ್ರರೂಪದಲ್ಲಿ ಎಲ್ಲವನ್ನೂ ಬಾಯಿಪಾಠ ಮಾಡುವ ಕ್ರಮವು ಕ್ರಮೇಣ ಇತರ ಜ್ಞಾನ ಉಪಯುಕ್ತವಾಯಿತು. ನಾಮಕರಣ, ಉಪನಯನ, ವಿವಾಹ, ಅಂತ್ಯ ಕ್ರಿಯೆಗಳ ರೀತಿಯನ್ನೂ ಆಯಾ ಸಮಯದಲ್ಲಿ ಹೇಳಬೇಕಾದ ಮಂತ್ರ ವಾಕ್ಯಗಳನ್ನೂ ತಿಳಿಸುವ ಗೃಹ್ಯಸೂತ್ರಗಳಿವೆ; ರಾಜನೀತಿಯನ್ನು ಬೋಧಿಸುವ ನೀತಿಸೂತ್ರಗಳೂ ಧರ್ಮವನ್ನು ಬೋಧಿಸುವ ಧರ್ಮಸೂತ್ರಗಳೂ ಇವೆ.

**ಸಹ ವಾಮೇನ ಉಷಿವ್ಯುಚ್ಛಾ ದುಹಿತರ್ದಿವಃ**

ಗಗನದುಹಿತೆಯೇ ಉಷೆಯೇ ನಮಗೆ ಧನವೀಯುವವಳಾಗಿ ಉದಯಳಾಗು. (ಇದೊಂದು ವೇದ ಮಂತ್ರದ ಚರಣ)

**ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ**
**ದೃಶೇ ವಿಶ್ವಾಯ ಸೂರ್ಯಂ.**

ಹುಟ್ಟಿದವರೆಲ್ಲರನ್ನೂ ಕಾಣುವ ಸೂರ್ಯದೇವನನ್ನು ಕಾಣುವಂತೆ ಕಿರಣಗಳು ಎತ್ತಿ ಹಿಡಿದಿವೆ. (ಇದು ಇನ್ನೊಂದು)

ವೇದಗಳ ಅನುಬಂಧಗಳೆಂದು ಗಣಿಸಲ್ಪಡುವ ಉಪನಿಷತ್ತುಗಳಲ್ಲಿ ಗುರುಶಿಷ್ಯ ಸಂವಾದಗಳ ಮತ್ತು ಕತೆಗಳ ಮೂಲಕ, ಆತ್ಮ, ಪರಮಾತ್ಮ, ಜನನಮರಣಗಳ ರಹಸ್ಯ, ಪುನರ್ಜನ್ಮ, ಸ್ವರ್ಗನರಕಗಳ ಕುರಿತು ಅಭಿಪ್ರಾಯ ವಿಶ್ವಾಸಗಳನ್ನು ತಿಳಿದುಕೊಳ್ಳಬಹುದು.

**ವೃದ್ಧಿರೇಚಿ**

ಅಕಾರಕ್ಕೆ ಏ, ಐ, ಓ, ಔ (ಏಚ್) ಗಳು ಪರವಾದರೆ ವೃದ್ಧಿಯಾಗುತ್ತದೆ. (ಇದು ಸೂತ್ರದ ಉದಾಹರಣೆ)

ವೇದಕಾಲಕ್ಕಿಂತ ಅನೇಕ ಶತಮಾನಗಳ ಅನಂತರ ಇತಿಹಾಸಗಳೆಂಬ, ಪುರಾಣಗಳೆಂಬ ನವೀನ ರೀತಿಯ ಸಾಹಿತ್ಯದ ಸೃಷ್ಟಿಯಾಯಿತು. ಧರ್ಮದ ತತ್ವಗಳನ್ನೂ ಕಟ್ಟುಕಟ್ಟಳೆಗಳನ್ನೂ ರೀತಿನೀತಿಗಳನ್ನೂ ಉದಾಹ

ರಿಸುವ ಉದ್ದೇಶದಿಂದಲೇ ನಿರ್ಮಿತವಾದ ಈ ಗ್ರಂಥಗಳಲ್ಲಿ ಅಲ್ಲಲ್ಲಿ ಆಯಾಕಾಲದ ಚರಿತ್ರೆಯ ಅಂಶಗಳೂ ಹುದುಗಿವೆ. ಕಾವ್ಯಭಾಗವೇ ವಿಶೇಷವಾಗಿರುವ ಈ ರಚನೆಗಳಲ್ಲಿ ನಿಜವಾದ ಚರಿತ್ರಾಂಶವುಯಾವುದೆಂದು ವಿಂಗಡಿಸುವುದು ಕಷ್ಟವಾದರೂ ಆ ಕಾಲದ ಜನರ ಜೀವನ, ಅವರ ಧರ್ಮ, ಅವರ ಸಮಾಜದ ಸ್ಥಿತಿಗಳು, ಇವೆಲ್ಲ ಅವುಗಳಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿವೆ.

ರಾಮಾಯಣದಲ್ಲಿ ದಶರಥನ ವಾಕ್ಯ ಪರಿಪಾಲನೆಗಾಗಿ ವನವಾಸಕ್ಕೆ ತೆರಳಿ ಹದಿನಾಲ್ಕು ವರ್ಷ ಕಷ್ಟಪಟ್ಟ ರಾಮನ ಪಿತೃಭಕ್ತಿ, ಸೀತೆಯ ಪತಿ ಭಕ್ತಿ, ಭರತನ ಬಂಧು ಪ್ರೇಮ ಇವನ್ನೆಲ್ಲ ಕವಿ ವಾಲ್ಮೀಕಿಯು ಚಿತ್ರಿಸಿದ ರೀತಿಗೆ ಜಗತ್ತಿನ ಸಾಹಿತಿಗಳೆಲ್ಲರೂ ತಲೆದೂಗಿಸಿದ್ದಾರೆ. ಸಂಸ್ಕೃತದಲ್ಲಿ ರಾಮಾಯಣದ ಮೊದಲು ಅಂಥ ಕಾವ್ಯವಿದ್ದಿಲ್ಲವೆಂದೂ ವಾಲ್ಮೀಕಿಯೇ ಆದಿ ಕವಿಯೆಂದೂ ಪೂಜ್ಯನಾಗಿದ್ದಾನೆ.

ಒಂದು ಲಕ್ಷ ಶ್ಲೋಕಗಳಿರುವ ಮಹಾಭಾರತಕ್ಕಿಂತ ದೊಡ್ಡ ಗ್ರಂಥ ಜಗತ್ತಿನಲ್ಲೇ ಇಲ್ಲ. ಕೌರವ ಪಾಂಡವರೆಂಬ ದಾಯಾದಿಗಳೊಳಗಾದ ಯುದ್ಧವೇ ಇದರ ಮೂಲ ಕಥಾವಸ್ತುವಾದರೂ ಸಾವಿತ್ರಿ–ಸತ್ಯವಾನ, ನಳ–ದಮಯಂತಿ, ದುಷ್ಯಂತ–ಶಕುಂತಳೆ, ಪುರು–ಊರ್ವಶಿ, ಕಚ–ದೇವಯಾನಿ, ದಧೀಚಿ ಮೊದಲಾದವರ ನೂರಾರು ಉಪಾಖ್ಯಾನಗಳೂ ಭಗವದ್ಗೀತೆ, ಧರ್ಮವಿಚಾರಗಳೇ ಮೊದಲಾದ ತತ್ವ ವಿಚಾರಗಳೂ, ರಾಜ ನೀತಿ, ಪೌರನೀತಿಗಳ ಭಾಗಗಳೂ ಮಹಾಭಾರತದಲ್ಲಿ ಅಡಕವಾಗಿದ್ದುದ ರಿಂದ ಅದು ಪಂಚಮ ವೇದವೆಂದೂ ಕರೆಯಲ್ಪಡುತ್ತದೆ. ಮೂಲ ಗ್ರಂಥವು ವ್ಯಾಸನಿಂದ ಪ್ರಣೀತವಾಗಿದ್ದರೂ ಒಬ್ಬರಿಂದೊಬ್ಬರು ಅದನ್ನು ಕಲಿಯುತ್ತಿರುವಾಗ ಇತರ ಕವಿಗಳು ತಂತಮ್ಮ ಕೃತಿಗಳನ್ನು ಮಹಾ ಭಾರತದಲ್ಲಿ ಸೇರಿಸಿದುದರಿಂದ ಅನೇಕ ನದಿಗಳಿಂದ ಕಪ್ಪಗೊಳ್ಳುವ ಸಮುದ್ರದಂತಿದೆ, ಆ ಮಹಾಗ್ರಂಥ.

ಸೃಷ್ಟಿ, ಪ್ರಳಯಗಳ ಕುರಿತು ಆರ್ಯರ ಭಾವನೆಗಳನ್ನೂ ವಿವಿಧ ಕಾಲದಲ್ಲಿ ಬಾಳಿದ ಅರಸುಮನೆತನಗಳ ವಿವರಗಳನ್ನೂ ಶಿವ, ಶಕ್ತಿ, ವಿಷ್ಣು ಮೊದಲಾದ ದೇವತೆಗಳ ಮಹಿಮೆಯನ್ನೂ ಬಣ್ಣಿಸುವ ಜನಸಾಮಾ

ನ್ಯರ ಮನರಂಜನೆಯ ಗ್ರಂಥಗಳೇ ಪುರಾಣಗಳು. ವೇದಕಾಲದಿಂದಲೂ ಸೂಕ್ಷ್ಮರೂಪದಲ್ಲಿದ್ದ ಪುರಾಣಗಳು ಬೌದ್ಧರ ಪ್ರಭಾವವು ಕಡಿಮೆಯಾಗಿ ನೂತನ ಹಿಂದೂಸಮಾಜವು ಉದಯವಾಗುವಾಗ–ಮುಖ್ಯವಾಗಿ ಗುಪ್ತರ ಯುಗದಲ್ಲಿ ಈಗಿನ ರೂಪಕ್ಕೆ ಬಂದುವೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

ಇವೆಲ್ಲವೂ ಸಂಸ್ಕೃತದಲ್ಲಿರುವ ಗ್ರಂಥಗಳು. ಸಂಸ್ಕೃತವು ಸಮಗ್ರ ಭಾರತದಲ್ಲಿ ಪಂಡಿತರ ಭಾಷೆಯಾಗಿದ್ದು ಉಚ್ಚವಿದ್ಯೆಯ ಬೋಧಭಾಷೆಯಾಗಿತ್ತು. ಜನಸಾಮಾನ್ಯರು ಪೈಶಾಚಿ, ಪಾಳಿ, ಮಾಗಧಿ, ಶೌರಸೇನೀ ಮೊದಲಾದ ನುಡಿಗಳನ್ನೂ ದಕ್ಷಿಣದಲ್ಲಿ ದ್ರಾವಿಡ ನುಡಿಗಳನ್ನೂ ಆಡುತ್ತಿದ್ದರು. ಜಾನಪದ ಸಾಹಿತ್ಯವು ಅಂದೂ ಇದ್ದಿರಬೇಕು. ಪೈಶಾಚಿ ಭಾಷೆಯಲ್ಲಿ ಕಥೆಗಳು ಸಾವಿರಾರು ಇದ್ದುವೆಂದೂ ಅವುಗಳಲ್ಲಿ ಕೆಲವನ್ನು ಆರಿಸಿ ಸಂಸ್ಕೃತದಲ್ಲಿ ಕಥಾಸರಿತ್ಸಾಗರವೆಂಬ ಗ್ರಂಥ ರಚಿತವಾಯಿತೆಂದೂ ಪ್ರತೀತಿ ಇದೆ. ಆಗಿನ ಜಾನಪದ ಸಾಹಿತ್ಯ ಮಾತ್ರ ಉಳಿದುಬಂದಿಲ್ಲ.

ಬುದ್ಧನು ಜನಸಾಮಾನ್ಯರಿಗೆ ತಿಳಿಯುವಂತೆ ಪಾಳಿ ಭಾಷೆಯಲ್ಲಿ ಬೋಧಿಸಿದುದರಿಂದ, ಅವನ ಶಿಷ್ಯರನೇಕರು ತಮ್ಮ ಧರ್ಮಗ್ರಂಥಗಳನ್ನು ಪಾಳಿಯಲ್ಲೇ ಬರೆದುದರಿಂದ, ಪ್ರಾದೇಶಿಕ ಭಾಷೆಗಳಲ್ಲೂ ಸಾಹಿತ್ಯ ರಚನೆಯ ಆರಂಭವಾಯಿತು. ಆದರೆ ಭಾರತದ ಎಲ್ಲೆಡೆಗಳಲ್ಲೂ ಒಂದು ಗ್ರಂಥವು ಮಾನ್ಯವಾಗಬೇಕಾದರೆ ಅದು ಸಂಸ್ಕೃತದಲ್ಲೇ ಇರಬೇಕೆಂದು ತಿಳಿದು ಕಡೆಕಡೆಗೆ ಬೌದ್ಧರು ಸಹ ಸಂಸ್ಕೃತದಲ್ಲೇ ಬರೆಯಲಾರಂಭಿಸಿದರು.

ಗುಪ್ತರ ಕಾಲದಲ್ಲಿದ್ದ ಕಾಳಿದಾಸನೇ ಸಂಸ್ಕೃತ ಕವಿಗಳಲ್ಲಿ ಅಗ್ರಗಣ್ಯನೆಂದು ಮನ್ನಿಸಲ್ಪಡುತ್ತಾನೆ. ಜಗತ್ತಿನ ಅತ್ಯುತ್ತಮ ಸಾಹಿತ್ಯಗ್ರಂಥಗಳ ಸಾಲಿನಲ್ಲೇ ಇಡಲ್ಪಡುವ ಅವನ ಅಭಿಜ್ಞಾನ ಶಾಕುಂತಳದ ಕಥಾವಸ್ತುವು ಮಹಾಭಾರತದಿಂದ ಆರಿಸಲ್ಪಟ್ಟಿದ್ದರೂ ಕಾಳಿದಾಸನ ಕೈಯಲ್ಲಿ ಅದು ವಿನೂತನವಾಗಿ ಕುಂದಣದ ಆಭರಣವನ್ನು ಸಿದ್ಧಮಾಡಿ ವಜ್ರದ ಕೆತ್ತನೆ ಮಾಡಿದಂತಾಗಿದೆ. ಇದಲ್ಲದೆ ಕಾಳಿದಾಸನ ರಘುವಂಶ ಕುಮಾರಸಂಭವಗಳೆಂಬ ಮಹಾಕಾವ್ಯಗಳೂ ಮೇಘದೂತವೆಂಬ ಲಘು

ಕಾವ್ಯವೂ ಸರ್ವಮಾನ್ಯವಾಗಿವೆ. ರಘುವಂಶದಲ್ಲಿ ರಘುಕುಲದ ಅರಸರ ಚರಿತ್ರೆಯೂ ಕುಮಾರಸಂಭವದಲ್ಲಿ ಶಿವಪಾರ್ವತೀ ವಿವಾಹವೂ ವರ್ಣಿಸಲ್ಪಟ್ಟಿದೆ. ಮೇಘದೂತದಲ್ಲಿ, ತನ್ನ ಮನೆಯಿಂದ ದೂರವಿರಬೇಕಾದ ಯಕ್ಷನೊಬ್ಬನು ಮಳೆಗಾಲದ ಮೋಡದ ಮೂಲಕ ಕುಶಲವಾರ್ತೆಯನ್ನು ತನ್ನ ಪ್ರಿಯೆಗೆ ಕಳುಹಿಸುವ ಸಂದರ್ಭ ಕಲ್ಪಿಸಿಕೊಂಡು ಕವಿ ಮೋಡವು ಹೋಗಬೇಕಾದ ದಾರಿಯ ವಿವರಕೊಡುವ ನೆಪದಲ್ಲಿ ಭಾರತದ ಭೂಭಾಗಗಳ ವರ್ಣನೆಯನ್ನು ಹೃದಯಂಗಮವಾಗಿ ಮಾಡಿದ್ದಾನೆ. ಕಾಳಿದಾಸನಿಂದ ರಚಿತವಾದ ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯಗಳು ಪ್ರಸಿದ್ಧ ನಾಟಕಗಳು.

ಕಾಳಿದಾಸನಿಗಿಂತ ಸ್ವಲ್ಪ ಕೆಳಗಿನ ಮಟ್ಟದಲ್ಲಿರುವ ಕೀರ್ತಿ ಉತ್ತರರಾಮಚರಿತವನ್ನು ಬರೆದ ಭವಭೂತಿ, ಕಿರಾತಾರ್ಜುನೀಯವನ್ನು ಬರೆದ ಭಾರವಿ, ಶಿಶುಪಾಲ ವಧೆಯನ್ನು ವರ್ಣಿಸಿದ ಮಾಘ, ಮೃಚ್ಛಕಟಿಕ ನಾಟಕವನ್ನು ಬರೆದ ಶೂದ್ರಕ ಮೊದಲಾದ ಕವಿಗಳಿಗೆ ಸಲ್ಲುತ್ತದೆ.

ಸಂಸ್ಕೃತವು ಪ್ರೌಢವಿದ್ಯಾಭ್ಯಾಸದ ಬೋಧಭಾಷೆಯಾಗಿ ಹಿಂದೂ ಮತ್ತು ಜೈನರಲ್ಲಿ ಬಾಳಿಬಂದರೂ ಬರಬರುತ್ತ ಉತ್ತಮ ಕಾವ್ಯರಚನೆಗಳು ಕಡಿಮೆಯಾಗಿ ಅನುಕರಣಗಳೂ ಅಣಕಗಳೂ ಟೀಕೆಗಳೂ ಹೆಚ್ಚಾಗಿ ಸ್ವಚ್ಛವಾದ ಸಾಹಿತ್ಯಧಾರೆಯು ವಾಗಾಡಂಬರದ ಮಳಲಲ್ಲಿ ಕಣ್ಮರೆಯಾಯಿತು.

ಪ್ರಾದೇಶಿಕ ಭಾಷೆಗಳಲ್ಲಿ ಸಾಹಿತ್ಯ ರಚನೆಯು ಭಕ್ತಿಮಾರ್ಗ ಬೋಧಕರಿಂದ ಆರಂಭವಾಯಿತು. ಬುದ್ಧನು ತಾನು ದೇವರೆಂದು ಹೇಳಿಕೊಳ್ಳದಿದ್ದರೂ ಅವನ ಅನುಯಾಯಿಗಳು ಆರಂಭದಲ್ಲಿ ಅವನ ಸಾನ್ನಿಧ್ಯವನ್ನು ಸೂಚಿಸುವ ಚಿಹ್ನೆಗಳನ್ನಿದುರಿಟ್ಟುಕೊಂಡೂ ಕಾಲಕ್ರಮೇಣ ಮೂರ್ತಿಗಳನ್ನಿಟ್ಟುಕೊಂಡೂ ಪೂಜಿಸಲಾರಂಭಿಸಿದರು. ಬುದ್ಧಧರ್ಮವು ಖಿಲವಾಗಿ ಹಿಂದೂ ಧರ್ಮದ ಪುನರುತ್ಥಾನವಾದಾಗ ಹಿಂದಿನ ಯಜ್ಞಯಾಗಾದಿಗಳೆಲ್ಲ ಹೋಗಿ ಪೂಜೆ ಉತ್ಸವಗಳೇ ಹೆಚ್ಚಾಗಿ ಭಕ್ತಿ ಬೋಧಕರೂ ಸಂತರೂ ಕೀರ್ತನೆಗಳಿಂದ ಜನರ ಮನಸ್ಸನ್ನು ಸೆಳೆಯಲಾರಂಭಿಸಿದರು. ಜಾನಪದ ಸಂಗೀತ, ಜಾನಪದ ಸಾಹಿತ್ಯಕ್ಕೇನೇ

ಮೀರುಗುಕೊಟ್ಟು ತಮ್ಮ ಆತ್ಮಕಳೆಯನ್ನು ಅದರಲ್ಲಿ ತುಂಬಿ ನೂತನ ಸಾಹಿತ್ಯ ಹುಟ್ಟುವಂತೆ ಮಾಡಿದರು.

ಹನಿಹನಿಯಾಗಿ ಹುಟ್ಟಿದ ಪ್ರಾದೇಶಿಕ ಸಾಹಿತ್ಯವು ಜೈನಕವಿಗಳು ತಮ್ಮ ಪುರಾಣಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ಬರೆಯಲಾರಂಭಿಸಿದಾಗ ಹೊಳೆಯಾಗಿ ಹರಿಯಲಾರಂಭವಾಯಿತು. ಕನ್ನಡದಲ್ಲೂ ತೆಲುಗಿನಲ್ಲೂ ಸಾಹಿತ್ಯ ಸ್ರೋತಸ್ಸು ಹುಟ್ಟಿದ್ದು ಜೈನ ಧರ್ಮಾಭಿಮಾನಿಗಳ ಕೃತಿಗಳಿಂದ. ತಮಿಳಿನಲ್ಲೂ ಹೀಗೆಯೇ. ಕನ್ನಡದ ಆದಿಕವಿಗಳಾದ ಪಂಪ, ರನ್ನ ಮೊದಲಾದವರು ಜೈನರಲ್ಲಿ ಪ್ರಚಾರವಿದ್ದ ಮಹಾಭಾರತಾದಿಗಳ ಕತೆಗಳನ್ನೂ ಜೈನ ಪುರಾಣಗಳನ್ನೂ ಮೂಲಾಧಾರವಾಗಿಟ್ಟುಕೊಂಡು ತಮ್ಮ ಅನುಭವ, ಕವಿತಾಶಕ್ತಿಗಳಿಂದ ಸಾಹಿತ್ಯ ಮಂದಿರವನ್ನು ಸ್ಥಾಪಿಸಿದರು. ಈ ಮಾದರಿಯನ್ನನುಸರಿಸಿ ಇತರ ಕವಿಗಳು ವ್ಯಾಸಭಾರತ, ವಾಲ್ಮೀಕಿ ರಾಮಾಯಣಗಳನ್ನೂ ಅವುಗಳಲ್ಲಿದ್ದ ಉಪಾಖ್ಯಾನಗಳನ್ನೂ ಉಪಯೋಗಿಸಿ ಕನ್ನಡ, ತೆಲುಗು, ತಮಿಳುಗಳಲ್ಲಿ ರಾಮಾಯಣ, ಮಹಾಭಾರತಗಳನ್ನೇ ಅನೇಕ ರೂಪಗಳಲ್ಲಿ ವರ್ಣಿಸಿದರು.

ಉತ್ತರ ಭಾರತದಲ್ಲೂ ವಾಲ್ಮೀಕಿ ರಾಮಾಯಣವನ್ನೇ ಅಡಿಗಲ್ಲಾಗಿಟ್ಟುಕೊಂಡು ತನ್ನದೇ ಆದ ಭವ್ಯ ರಾಮಾಯಣವೊಂದನ್ನು ತುಲಸೀದಾಸನು ರಚಿಸಿ ಹಿಂದೀ ಸಾಹಿತ್ಯಕ್ಕೆ ಮೂಲಸ್ತಂಭನಾದನು. ಬಂಗಾಳಿ, ಗುಜರಾತಿ ಭಾಷೆಗಳಲ್ಲೂ ಸಾಹಿತ್ಯಾರಂಭವು ರಾಮಾಯಣ ಮಹಾಭಾರತಗಳ ಪ್ರಾದೇಶಿಕ ರೂಪಗಳಿಂದಾಗಿದೆ.

ಮಹಾಕಾವ್ಯಗಳನ್ನು ಜನರು ತಿಳಿಯುವಂತೆ ವಾಚನಗಳೂ ಹರಿಕತೆಗಳೂ ಬಯಲಾಟಗಳೂ ಆರಂಭವಾದುವು. ನಡುವೆ ಕನ್ನಡ ನಾಡಿನಲ್ಲಿ ದಾಸರೂ ತಮಿಳು ನಾಡಿನಲ್ಲಿ ಆಳ್ವಾರರೂ ಮಹಾರಾಷ್ಟ್ರದಲ್ಲಿ ಸಂತರೂ ಸುಲಭವಾಗಿ ಎಲ್ಲರೂ ಕೂಡಿ ಹಾಡಬಹುದಾದ ಕೀರ್ತನೆಗಳಿಂದ ಭಕ್ತಿಬೋಧೆಯನ್ನು ಬಿತ್ತರಿಸಿದರು.

ಇಷ್ಟೆಲ್ಲ ಸಾಹಿತ್ಯರಾಶಿ ಪದ್ಯಸಾಹಿತ್ಯದ್ದೇ ಇದೆ. ಸಂಸ್ಕೃತದಲ್ಲಿ ಬಾಣನೆಂಬವನ ಕಾದಂಬರೀಗ್ರಂಥವು ಗದ್ಯದಲ್ಲಿದೆ; ಪ್ರಾದೇಶಿಕ ಭಾಷೆಗಳಲ್ಲೂ ಅಲ್ಲಲ್ಲಿ ಗದ್ಯಖಂಡಗಳಿವೆ. ಆದರೆ ಉದ್ದುದ್ದ ವಾಕ್ಯಗಳ ಜಟಿಲ

ವಾದ ಆ ಗದ್ಯ ಪ್ರಬಂಧಗಳು ಪದ್ಯಕ್ಕಿಂತಲೂ ಕಷ್ಟವಾಗಿವೆ. ಬಾಣನ ಗ್ರಂಥದಲ್ಲಿ ಆರೇಳು ಪುಟಕ್ಕೊಂದು ವಾಕ್ಯದಂತೆ ಬೆಳೆಯುವುದನ್ನು ಕಾಣಬಹುದು.

ಕನ್ನಡದ ಮಟ್ಟಿಗೆ ಹೇಳುವುದಾದರೆ ಶಿವಶರಣರ ವಚನಗಳಲ್ಲಿ ಗದ್ಯದ ಸರಳತೆಯೂ ಪದ್ಯದ ಹೃದಯಂಗಮತ್ವವೂ ಒಂದಾಗಿ ಬೆರೆತಂತಿದೆ ಎನ್ನಬಹುದು. ಸರ್ವಜ್ಞನ ತ್ರಿಪದಿಗಳು ಛಂದೋಬದ್ಧವಾಗಿದ್ದರೂ ಕೂಡ ಜನರ ಆಡುಮಾತಿನಂತೆ ಸರಳವಾಗಿದ್ದು ಉತ್ತಮ ಗದ್ಯವೆಂದರೆ ಹೀಗಿರಬೇಕು ಎನ್ನುವಂತಿವೆ.

ಕ್ರೈಸ್ತ ಪಾದ್ರಿಗಳು ತಮ್ಮ ಮತಪ್ರಚಾರವು ದೀನದಲಿತರಲ್ಲಾಗಬೇಕೆಂದು ಬಾಯ್ಬಲನ್ನು ಭಾರತದ ದೇಶಭಾಷೆಗಳಲ್ಲಿ ಭಾಷಾಂತರಿಸಲಿಕ್ಕೆ ಆರಂಭಿಸಿದಾಗ ಅರ್ವಾಚೀನ ಸಾಹಿತ್ಯಕ್ಕೆ ಆರಂಭವಾಯಿತೆಂದರೆ ತಪ್ಪಾಗದು. ಬಾಯ್ಬಲಿನ ಭಾಷಾಂತರವು ಜನಸಾಮಾನ್ಯರಿಗೂ ಅರ್ಥವಾಗುವಂತೆ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟು ತಿಳಿಯಾದ ಗದ್ಯರಚನೆಗೆ ಪ್ರಯತ್ನಗಳಾದುವು. ಬಾಯ್ಬಲಿನ ಹಿಂದೆಯೇ ಅನೇಕ ನೀತಿಕಥೆಗಳೂ ಧರ್ಮಕಥೆಗಳೂ ಮಕ್ಕಳ ಕಥೆಗಳೂ ಹಾಡುಗಳೂ ಕ್ರೈಸ್ತ ಪಾದ್ರಿಗಳ ಪ್ರೋತ್ಸಾಹದಿಂದ ಉದಯವಾದುವು.

ಇಂಗ್ಲಿಷು ಭಾಷೆ, ಸಾಹಿತ್ಯಗಳು ವಿದ್ಯಾವಂತರ ಮನಸ್ಸನ್ನು ಸೂರೆ ಮಾಡಿದಾಗ ಭಾರತದಲ್ಲಿ ಎಲ್ಲೆಡೆಗಳಲ್ಲಿಯೂ ವಿದ್ಯಾವಂತರು ಇಂಗ್ಲಿಷಿನಲ್ಲೇ ಮಾತಾಡುವ ಇಂಗ್ಲಿಷಿನಲ್ಲೇ ಬರೆಯುವ ಕ್ರಮವನ್ನಾರಂಭಿಸಿದರು; ದೇಶಭಾಷೆಗಳಿಗೆ ಗೌರವವೇ ಸಿಕ್ಕಲಿಲ್ಲ. ಅರವಿಂದ ಘೋಷ್, ತರುಲತಾ ದತ್ತ, ಸರೋಜಿನಿ ನಾಯ್ಡು ಮೊದಲಾದವರು ಇಂಗ್ಲಿಷಿನಲ್ಲಿ ಕವನಗಳನ್ನೂ ನಾಟಕಗಳನ್ನೂ ಬರೆದು ತಾತ್ಕಾಲಿಕ ಕೀರ್ತಿ ಗಳಿಸಿದರು.

ಎಷ್ಟೆಂದರೂ ಭಾರತದ ಆತ್ಮಗೌರವಕ್ಕೆ ಇದು ಸಲ್ಲದೆಂದೂ ತಮ್ಮ ಭಾಷೆಯಲ್ಲೇ ಬರೆಯಬೇಕೆಂದೂ ಮೊತ್ತಮೊದಲು ಬಂಗಾಳದಲ್ಲಿ ಆಧುನಿಕ ಸಾಹಿತ್ಯ ಸೇವೆಗೆ ಅನೇಕರು ಮುಂದೆ ಬಂದರು. ಬಂಕಿಮ ಚಂದ್ರ ಚಟ್ಟೋಪಾಧ್ಯಾಯರ ಕಾದಂಬರಿಗಳು, ರಬೀಂದ್ರನಾಥ ಠಾಕೂರರ ಕಥೆ ಕವನಗಳು ಮಾರ್ಗದರ್ಶಿಗಳಾಗಿ ಬಂಗಾಳಿಯಲ್ಲಿಯೂ ಅನಂತರ ಅವ

ರನ್ನನುಸರಿಸಿ ಇತರ ದೇಶಭಾಷೆಗಳಲ್ಲಿಯೂ ಸಾಹಿತ್ಯ ರಚನೆಗೆ, ಮುಖ್ಯ ವಾಗಿ ಗದ್ಯದ ಬೆಳೆವಣಿಗೆಗೆ ಅವಕಾಶವಾಯಿತು.

ಸ್ವತಂತ್ರ ಭಾರತದಲ್ಲಿ ಪ್ರಾದೇಶಿಕ ಭಾಷೆಗಳು ಹ್ಯಾಸ್ಕೂಲು ಮಟ್ಟದ ಬೋಧಭಾಷೆಗಳಾಗಿವೆಯಾದರೂ ಆಧುನಿಕ ವಿಜ್ಞಾನ, ಯಂತ್ರಜ್ಞಾನ, ವೈದ್ಯ, ಶಿಲ್ಪಾದಿಗಳ ಅನುಭವವನ್ನು ಕೊಡುವ ಉತ್ತಮ ಗ್ರಂಥಗಳು ನಮ್ಮ ಭಾಷೆಗಳಲ್ಲಿ ಇನ್ನೂ ಪ್ರಕಟವಾಗಿಲ್ಲ. ಕಾಲೇಜು ಮಟ್ಟದ ಶಿಕ್ಷಣಕ್ಕೆ ಬೋಧಭಾಷೆ ಯಾವುದಾಗಬೇಕು— ಇಂಗ್ಲೀಷೊ? ಹಿಂದಿಯೋ? ಪ್ರಾದೇಶಿಕ ಭಾಷೆಯೋ ಎಂಬ ಕುರಿತು ಇನ್ನೂ ವಿವಾದವೇ ನಡೆಯುತ್ತಿದೆ.

---

## ೫. ಕಲಾದರ್ಶನ

ಬರೆಹವನ್ನು ಸೃಷ್ಟಿಸುವ ಮೊದಲೇ ಜನರು ಸಾಹಿತ್ಯದ ಮೂಲಕ, ಸಾಹಿತ್ಯಕ್ಕಿಂತ ಮೊದಲೇ ಭಾಷೆ, ಚಿತ್ರಕಲೆ, ನಾಟ್ಯ, ನಟನೆಗಳ ಮೂಲಕ ತಮ್ಮ ಮನೋಗತಗಳನ್ನು ವ್ಯಕ್ತಪಡಿಸುತ್ತಿದ್ದರೆಂಬುದು ಎಲ್ಲರಿಗೂ ತಿಳಿದಿರುವ ವಿಷಯು. ತನ್ನ ಸುತ್ತಲಿನ ಸೃಷ್ಟಿ, ಸಮಾಜಗಳಿಂದ ವ್ಯಕ್ತಿಯು ಮೇಲುಂಟಾದ ಪರಿಣಾಮಗಳನ್ನು, ಭಾವನೆ ಕಲ್ಪನೆಗಳನ್ನು, ವಿಶದಗೊಳಿಸಲು ಅವಕಾಶವಿರುವ ಕಲಾಕ್ಷೇತ್ರಗಳಲ್ಲಿ ವಿಸ್ತಾರಗೊಳಿಸಿದಾಗ, ಹೆಚ್ಚೆಚ್ಚು ಮಂದಿ ಆ ಕ್ಷೇತ್ರಗಳಲ್ಲಿ ಪರಿಶ್ರಮಿಸಿದಾಗ, ಅಂತಹ ಜನ ಸಂಸ್ಕೃತಿಪಥದಲ್ಲಿ ಮುಂದುವರಿದವರೆಂದಾಗುವುದು. ಭಾರತದ ಹಿರಿಯರು ಕಲಾಕ್ಷೇತ್ರಗಳಲ್ಲಿ ಎಷ್ಟೊಂದು ಶ್ರಮಿಸಿ ನಮಗಾಗಿ ಏನೆಲ್ಲ ಕಾದಿಟ್ಟಿದ್ದಾರೆಂದು ತಿಳಿದರೆ ಅದು ನಮಗೊಂದು ಹೆಮ್ಮೆಗೆ ಕಾರಣವೂ ಅವರ ಸಂತತಿಯವರೆಂದುಕೊಳ್ಳಬೇಕಾದ ನಮ್ಮ ಹೊಣೆಗಾರಿಕೆ ಎಷ್ಟೆಂದು ತಿಳಿಯುವ ಸಾಧನವೂ ಆಗುವುದು.

ಭಾರತೀಯರ ವಾಸ್ತುಶಿಲ್ಪದ ಜನನ ನೋಡಬೇಕಿದ್ದರೆ ಮೊಹೆಂಜೊ ಡರೋವಿಗೆ ಹೋಗಬಹುದು. ಮಣ್ಣಿನ ಇಟ್ಟಿಗೆಗಳಿಂದ ಕಟ್ಟಿದ ಮನೆ,



ಆಬೂವಿನ ದಿಲಾವರ್ ದೇವಾಲಯಗಳಲ್ಲಿನ ಚಂದ್ರಕಾಂತ ಶಿಲಾನಿರ್ಮಿತವಾದ ಸುಂದರ ಶಿಲ್ಪಕೃತಿ



ಅಜಂತದ ಗುಹಾಲಯಗಳಲ್ಲಿನ ಸುಂದರ ಚಿತ್ರಗಳಲ್ಲೊಂದಾದ
ಪದ್ಮಪಾಣೀ ಬುದ್ಧ.

ಮಂದಿರಗಳೂ, ಸ್ನಾನಾಗಾರಗಳೂ, ಕೋಟಿಕೊತ್ತಲಗಳೂ, ನೂಲು ಹಿಡಿದು ಒಂದರ ಮೇಲೊಂದಿಟ್ಟು ಭದ್ರವಾಗಿ ಕಟ್ಟಿದ ಅಂದಿನ ಗೋಡೆಗಳ ಅಂಶಗಳೂ ಇಂದಿಗೂ ಉಳಿದಿವೆ ಎಂದರೆ ಆ ಕಾಲದ ಜನರು ಉತ್ತಮ ಕೆಲಸಗಾರರಾಗಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಮೊಹೆಂಜೊಡರೋವಿನ ಯುಗಕ್ಕೂ ಮೌರ್ಯ ಯುಗಕ್ಕೂ ಅಂತರದಲ್ಲಿ ನಿರ್ಮಿತವಾದ ಕಟ್ಟಡಗಳ ಕುರುಹುಗಳಿಲ್ಲಿಯೂ ಇಷ್ಟರ ವರೆಗೆ ಕಂಡುಬಂದಿಲ್ಲ. ಆ ಅವಧಿಯಲ್ಲಿ ಹೆಚ್ಚಿನ ಮಟ್ಟಿಗೆ ಮರದಿಂದಲೇ ಕಟ್ಟಡಗಳನ್ನು ಕಟ್ಟಿರಬೇಕು. ಇತ್ತೀಚೆಗೆ ಪಾಟ್ನಾ ನಗರದ ಹತ್ತಿರ ಅಗೆದು ತೆಗೆದ ಅವಶೇಷಗಳು ಮೌರ್ಯರ ರಾಜಧಾನಿಯಾಗಿದ್ದ ಪಾಟಲೀಪುತ್ರದವೆಂದು ತಿಳಿದು ಬರುತ್ತದೆ. ಅಲ್ಲಿ ಮರದ ಕಂಬಗಳೂ ಕಿಟಿಕಿಗಳೂ ಸಿಕ್ಕಿರುವುದರಿಂದ ಮೌರ್ಯರ ಕಾಲದಲ್ಲಿ ಸಹ ಮರದ ಮನೆಗಳೇ ಹೆಚ್ಚಾಗಿದ್ದುವೆನ್ನಬಹುದು. ಅಶೋಕನ ಕಾಲದಲ್ಲಿ ಕಟ್ಟಲ್ಪಟ್ಟ ಬೇರೆ ಕಟ್ಟಡಗಳು ಕಾಣುವುದಿಲ್ಲವಾದರೂ ಸ್ತೂಪ, ಚೈತ್ಯ, ವಿಹಾರಗಳ ಅವಶೇಷಗಳನ್ನು ಈಗಲೂ ಕಾಣಬಹುದು. ಬುದ್ಧನ ಚಿತಾಭಸ್ಮವನ್ನಾಗಲೀ ಅವನ ಶಿಷ್ಯರ ಅವಶೇಷಗಳನ್ನಾಗಲೀ ಸುಂದರವಾದ ಕರಡಿಗೆಯಲ್ಲಿ ಹೂತಿಟ್ಟು ಅದರ ಮೇಲೆ ಇಟ್ಟಿಗೆಗಳಿಂದ ಅರ್ಧಗೋಲಾಕೃತಿಯ ದಿನ್ನೆಯನ್ನು ಕಟ್ಟಿದರೆ ಸ್ತೂಪವೆಂದಾಯಿತು. ಅನೇಕ ಸ್ತೂಪಗಳ ಶಿಖರದಲ್ಲಿ ಛತ್ರಾಕೃತಿ, ಸ್ತೂಪಗಳ ಸುತ್ತಲೂ ಕಲ್ಲುಕಂಬಗಳ ಆವರಣ, ನಾಲ್ಕು ದಿಕ್ಕುಗಳಲ್ಲಿ ಕಲ್ಲುಕೆತ್ತನೆಯ ದ್ವಾರಮಂಟಪಗಳು ಕಂಡುಬರುವುವು.

ಚಿಕ್ಕದೊಂದು ಸ್ತೂಪಾಕೃತಿಯ ಇದಿರು ಭಕ್ತರು ಪೂಜಾ ಪ್ರಾರ್ಥನೆಗಳಿಗೆ ಸೇರುವ ಅವಕಾಶವಿರುವ ಉದ್ದದ ಮೊಗಸಾಲೆಯಿದ್ದರೆ ಅದನ್ನು ಚೈತ್ಯಾಲಯವೆಂದೂ ಬುದ್ಧಭಿಕ್ಷುಗಳಾಗಲೀ ಭಿಕ್ಷುಣಿಗಳಾಗಲೀ ವಾಸಿಸುವ ಮಠಗಳನ್ನು ವಿಹಾರಗಳೆಂದೂ ಕರೆಯುತ್ತಿದ್ದರು. ಅಸಂಖ್ಯಾತ ವಿಹಾರಗಳಿದ್ದ ಪ್ರದೇಶವನ್ನು ಈಗಲೂ ಬಿಹಾರವೆನ್ನುತ್ತೇವೆ. ಬೌದ್ಧರ ಚೈತ್ಯಾಲಯ ವಿಹಾರಗಳಿದ್ದಂತೆ ಅದೇ ಕಾಲದಲ್ಲಿ ಜೈನ ಮಂದಿರಗಳೂ ಮಠಗಳೂ ಕಟ್ಟಲ್ಪಟ್ಟಿದ್ದುವು.

ಬೌದ್ಧಧರ್ಮದ ಪ್ರಭಾವವು ಅಸ್ತವಾಗುತ್ತ ಬಂದು ಹಿಂದೂ

ಧರ್ಮದ ಪುನರುದಯವಾದಾಗ, ಸಾಧಾರಣ ಗುಪ್ತಕಾಲದಿಂದಾರಂಭ ವಾಗಿ ದೇಶದಾದ್ಯಂತ ಭವ್ಯವಾದ ದೇವಸ್ಥಾನಗಳನ್ನು ಕಟ್ಟಲಿಕ್ಕಾರಂಭ ವಾಯಿತು. ಹಾಗೆಂದು ಬೌದ್ಧ ಮಂದಿರಗಳ ಸ್ಥಾಪನೆ ಫಕ್ಕನೆ ನಿಂತು ಹೋಗಲಿಲ್ಲ. ಒಂದೇ ಕಾಲದಲ್ಲಿ ಒಂದೇ ಪ್ರದೇಶದಲ್ಲಿ ಸಹ ಬೌದ್ಧರೂ ಜೈನರೂ ಹಿಂದುಗಳೂ ತಂತಮ್ಮ ಧರ್ಮಮಂದಿರಗಳನ್ನು ಕಟ್ಟುತ್ತಿದ್ದರು. ಉತ್ತರ ಭಾರತದಲ್ಲಿದ್ದ ಪ್ರಾಚೀನವಾದ ಕಟ್ಟಡಗಳಲ್ಲಿ ಹಲವನ್ನು ಇಸ್ಲಾಮಿನ ಅಂಧಭಕ್ತರಾದ ಕೆಲಮಂದಿ ಯೋಧರೂ ಅವರ ಅನುಯಾಯಿಗಳೂ ನೆಲಸಮ ಮಾಡಿದುದರಿಂದ ಈಗ ಉತ್ತರಭಾರತದಲ್ಲಿ ಕಂಡುಬರುವ ದೇವಸ್ಥಾನಗಳಲ್ಲಿ ಹೆಚ್ಚಿನವು ಜೀರ್ಣೋದ್ಧಾರ ಮಾಡಿದಂಥವು; ಹಿಂದಿನ ದೇವಸ್ಥಾನಗಳನ್ನು ಕೆಡವಿ ಹಾಕಿದ ಮೇಲೆ ಪ್ರತಿಮೆಗಳನ್ನು ಬೇರೆಡೆಗೆ ಒಯ್ದು ಪ್ರತಿಷ್ಠಿಸಲಿಕ್ಕೆ ರಚಿತವಾದ ನೂತನ ಮಂದಿರಗಳು. ಆದರೂ ಮಧ್ಯ ಯುಗದಲ್ಲಿ ಕಾಶ್ಮೀರದ ಅನಂತನಾಗ ಮೊದಲಾದೆಡೆಗಳಲ್ಲಿದ್ದ ದೇವಸ್ಥಾನಗಳ ಅವಶೇಷಗಳನ್ನೂ ರಾಜಪೂತರು ಕಟ್ಟಿಸಿದ ದೇವಾಲಯಗಳನ್ನೂ ಈಗಲೂ ಕಾಣಬಹುದು.

ಭಾರತದ ಪ್ರಾಚೀನ ವಾಸ್ತುಶಿಲ್ಪದಲ್ಲಿ ರಚನೆಯ ವಿಧಾನವನ್ನನುಸರಿಸಿ ಎರಡು ಮುಖ್ಯ ವರ್ಗಗಳನ್ನು ಮಾಡಬಹುದು. ದೊಡ್ಡ ದೊಡ್ಡ ಬಂಡೆಕಲ್ಲುಗಳು ಇದ್ದಲ್ಲಿ ಅವನ್ನು ಹೊರಗೂ ಒಳಗೂ ಕೆತ್ತಿ, ಕೊರೆದು ಒಂದು ಕಟ್ಟಡವಾಗುವಂತೆ ಮಾಡುವ ರೀತಿಯೊಂದು. ಇದಕ್ಕೆ ವಿಶೇಷ ಶ್ರಮವೂ ಜಾಣ್ಮೆಯೂ ಅಗತ್ಯವಿರುವುದರಿಂದ ಇಂಥ ವಾಸ್ತುಶಿಲ್ಪಗಳನ್ನು ಅನೇಕ ಕಡೆ ಕಾಣಲಾರೆವು. ಅಜಂತದ ಗವಿಗಳೆಂದು ಕರೆಯಲ್ಪಡುವ ಮಂದಿರಗಳೂ ಎಲ್ಲೋರದಲ್ಲಿರುವ ಕೈಲಾಸ ದೇವಸ್ಥಾನವೂ ಇಂಥ ಶಿಲ್ಪದ ಅತ್ಯುತ್ತಮ ನಿದರ್ಶನಗಳಾಗಿವೆ. ಹೈದರಾಬಾದು ರಾಜ್ಯದಲ್ಲಿರುವ ಔರಂಗಾಬಾದಿನಿಂದ 80 ಮೈಲು ದೂರದಲ್ಲಿರುವ ಗುಡ್ಡಗಳ ಬದಿಯಲ್ಲಿರುವ ಹದಿನಾಲ್ಕು ಗವಿಗಳು ಬರೀ ಗುಹೆಗಳಲ್ಲ; ಅವುಗಳು ಬಂಡೆಯನ್ನು ಕೊರೆದು ನಿರ್ಮಿಸಿದ ಚೈತ್ಯಾಲಯಗಳೂ ವಿಹಾರಗಳೂ ಹಿಂದೂ ಮಂದಿರಗಳೂ ಆಗಿವೆ. ಬಾಗಿಲು, ಕೋಣೆ, ಕಂಬಗಳ ಸಾಲು, ಸ್ತೂಪ, ಮಲಗುವ ಮಂಚ, ಕುಳಿತುಕೊಳ್ಳುವ ಮಣೆ—ಎಲ್ಲವೂ ಆಯಾ ಸ್ಥಳಗಳಲ್ಲಿ ಕೊರೆದು

ನಿರ್ಮಿಸಲ್ಪಟ್ಟವುಗಳೆಂದರೆ ಏನಾಶ್ಚರ್ಯವಾಗುವುದು! ಎಲ್ಲೋರದಲ್ಲಿ ಸುತ್ತಲೂ ಪ್ರಾಗಾರ ಪೌಳಿಗಳು, ಧ್ವಜಸ್ತಂಭ, ಗರ್ಭಗೃಹ, ಗೋಪುರ—ಎಲ್ಲವೂ ಕೊರೆದು ಕೆತ್ತಿತೆಗೆದು ನಿರ್ಮಿತವಾಗಿವೆ ಎಂದರೆ ಇಂಥ ರೀತಿಯಲ್ಲಿ ನಿರ್ಮಿತವಾದ ವಾಸ್ತುಶಿಲ್ಪವು ಜಗತ್ತಿನ ಬೇರೆಕಡೆಗಳಲ್ಲಿ ದುರ್ಲಭವೆಂದರೆ ಆಶ್ಚರ್ಯವಾಗದು. ಮದ್ರಾಸಿನ ದಕ್ಷಿಣಕ್ಕೆ 30 ಮೈಲು ದೂರದಲ್ಲಿರುವ ಮಹಾಬಲಿಪುರದ ಹತ್ತಿರ ಬಂಡೆಯನ್ನು ಕೊರೆದು ಕೆತ್ತಿದ ರಥಗಳೆಂಬ ಮಂದಿರಗಳು ಎಲ್ಲೋರ, ಅಜಂತಗಳಷ್ಟು ದೊಡ್ಡವಲ್ಲವಾದರೂ ಅಲ್ಲಿಯೂ ನಮ್ಮ ವಾಸ್ತುಶಿಲ್ಪಿಯ ಕೌಶಲ್ಯವನ್ನು ಕಾಣಬಹುದು. ಮುಂಬಾಯಿಯ ಹತ್ತಿರದ ದ್ವೀಪದಲ್ಲಿ ಚಿಕ್ಕತರದಲ್ಲಿ ತ್ರಿಮೂರ್ತಿಗಳ ಗುಹಾಲಯಗಳನ್ನೂ ಬಾದಾಮಿಯಲ್ಲೂ ಕೆಲವನ್ನು ಕಾಣಬಹುದು.

ಶಿಲ್ಪರಚನೆಯಲ್ಲಿ ಇನ್ನೊಂದು ರೀತಿಯೆಂದರೆ ಬಂಡೆಕಲ್ಲುಗಳ ದೊಡ್ಡ ದೊಡ್ಡ ತುಂಡುಗಳನ್ನು ತೆಗೆದು ರೂಪಿಸಿ, ಕೆತ್ತಿ ಸಿಂಗರಿಸಿ ದೇವಸ್ಥಾನಗಳ ಚಾವಡಿ, ಕಂಬ, ಬಾಗಿಲು, ಮಾಡು, ಗೋಪುರಗಳನ್ನು ನಿರ್ಮಿಸುವುದು. ಈ ರೀತಿಯಲ್ಲಿ ನಿರ್ಮಿತವಾದ ಬೌದ್ಧ, ಜೈನ, ಹಿಂದೂ ಮಂದಿರಗಳೂ ರಾಜರ ಅರಮನೆಗಳೂ ಸಾವಿರಾರು ಇವೆ. ಅವುಗಳ ಆಕಾರ, ಪ್ರಮಾಣಗಳ ಕಡೆಗೆ ಗಮನವಿತ್ತರೆ ಆಬು ಪರ್ವತದ ತುದಿಯಲ್ಲಿರುವ ಜೈನಮಂದಿರಗಳನ್ನು ಒಂದು ಸಾಲಿನಲ್ಲೂ ಕರ್ಣಾಟಕದ ಬೇಲೂರು ಹಳೆಬೀಡುಗಳಲ್ಲಿರುವ ದೇವಸ್ಥಾನಗಳನ್ನು ಇನ್ನೊಂದು ವರ್ಗದಲ್ಲೂ ಮಧುರೆ, ತಂಜಾವೂರು. ಕಾಂಚಿ, ರಾಮೇಶ್ವರಗಳಲ್ಲಿನ ದೇವಸ್ಥಾನಗಳನ್ನು ಬೇರೊಂದು ಪಂಗಡಕ್ಕೂ ಸೇರಿಸಬಹುದು.

ಮುಸ್ಲಿಮ ಅರಸರಲ್ಲಿ ಮೊದಲಿಗರಾದ ಕೆಲವರು ಪ್ರಾಚೀನ ಮಂದಿರಗಳನ್ನು ಕೆಡವಿ ಅವುಗಳ ಕಲ್ಲುಗಳನ್ನೇ ಉಪಯೋಗಿಸಿ ಬೇರೆ ಕಟ್ಟಡಗಳನ್ನು ನಿರ್ಮಿಸುವುದೇ ಹೆಮ್ಮೆಯ ವಿಷಯವೆಂದು ತಿಳಿದಿದ್ದರು. ಢಿಲ್ಲಿಯ ಕುತುಬ್ ಮಿನಾರ್ ಎಂಬ ಉನ್ನತವಾದ ಸ್ತಂಭದ ನಿರ್ಮಾಣವಾದುದು ಹೀಗೆ. ಅನಂತರದ ಮುಸ್ಲಿಂ ಅರಸರು ಹೊರಗಿನಿಂದ ಬಂದವರಿರದೆ ಇಲ್ಲಿಯೇ ಹುಟ್ಟಿ ಬೆಳೆದು ಭಾರತದ ಜನರೇ ಆದಾಗ ತಾವಾಗಿ ಹೊಸಹೊಸ ಅರಮನೆಗಳನ್ನೂ ಮಸೀದಿಗಳನ್ನೂ ಗೋರಿ

ಗಳನ್ನೂ ಕಟ್ಟಿಸಲಾರಂಭಿಸಿದರು. ಅಕ್ಬರನ ಕಾಲದಲ್ಲಿ ಫತ್ತೇಪುರ ಸಿಕ್ರಿಯಲ್ಲಿ ಅವನು ಕಟ್ಟಿಸಿದ ಕಟ್ಟಡಗಳನ್ನೂ ಅವನೂ ಅವನ ಸಂತತಿಯವರೂ ಆಗ್ರಾ ನಗರದಲ್ಲಿ ಕಟ್ಟಿಸಿದ ಅರಮನೆಗಳನ್ನೂ ಕಂಡರೆ ಅವುಗಳ ಭವ್ಯತೆಗೆ ಯಾರೂ ಬೆರಗಾಗಲೇ ಬೇಕು. ಮೊಗಲರ ಕಾಲದ ನಿರ್ಮಾಣಗಳಲ್ಲಿ ಷಾಜಹಾನನು ಅಮೃತಶಿಲೆಯಿಂದ ಕಟ್ಟಿಸಿದ ತಾಜಮಹಲ್ ಎಂಬ ಗೋರಿಯು ಜಗತ್ಪ್ರಸಿದ್ಧವಾಗಿದೆಯಷ್ಟೆ!

ಮೊಗಲರ ಭವ್ಯ ವಾಸ್ತುಶಿಲ್ಪಗಳನ್ನು ಢಿಲ್ಲಿ, ಆಗ್ರಾಗಳಲ್ಲಿ ಕಾಣುವಂತೆ ದೇಶದ ಪ್ರತಿಯೊಂದು ಭಾಗದಲ್ಲಿ ಅಲ್ಲಲ್ಲಿನ ಸುಲ್ತಾನರೂ ನವಾಬರೂ ಕಟ್ಟಿಸಿದ ಅರಮನೆಗಳನ್ನೂ ಮಸೀದಿಗಳನ್ನೂ ಗೋರಿಗಳನ್ನೂ ಕಾಣಬಹುದು, ಕಂಡು ಕಣ್ತಣಿಸಿಕೊಳ್ಳಬಹುದು. ಗುಲ್ಬರ್ಗದಲ್ಲಿರುವ ಗೋಲ್‌ಗುಂಬಜ್‌ದ ಅರ್ಧಗೋಲಾಕೃತಿಯ ಕಲ್ಲುಮಾಡು ಜಗತ್ತಿನಲ್ಲೇ ಅತಿ ದೊಡ್ಡ ಕಲಾಕೃತಿಗಳಲ್ಲೊಂದು.

ಈ ಅರಮನೆ, ಮಸೀದಿ, ಗೋರಿಗಳ ನಿರ್ಮಾಣದಲ್ಲಿ ಇಲ್ಲಿನ ಪ್ರಾಚೀನ ಶಿಲ್ಪಿಗಳು ಪರ್ಶಿಯಾ ಮೊದಲಾದ ಕಡೆಗಳಿಂದ ಬಂದ ಶಿಲ್ಪಿಗಳ ಮೇಲ್ವಿಚಾರದಲ್ಲಿ ಕೆಲಸಮಾಡಿದುದರಿಂದ ಅವುಗಳ ರಚನೆಯಲ್ಲಿ ಮಧ್ಯಪೂರ್ವದ ಕಟ್ಟಡಗಳ ಮತ್ತು ಭಾರತದ ವಾಸ್ತುಶಿಲ್ಪದ ಮಿಶ್ರಪಾಕವನ್ನು ಕಾಣಬಹುದು. ಹಿಂದಿನ ಕಟ್ಟಡಗಳಲ್ಲಿ ದ್ವಾರಗಳ ಮೇಲ್ಬದಿಯಲ್ಲಿ ಅಡ್ಡಕಂಬಗಳೇ ಹೆಚ್ಚಾಗಿ ಕಂಡುಬಂದರೆ ಈ ಹಿಂದೂ ಮುಸ್ಲಿಮ್ ಕಟ್ಟಡಗಳಲ್ಲಿ ಚೂಪಾದ ಕಮಾನುಗಳು ತೋರಿಬರುತ್ತವೆ. ಹಿಂದೂ ದೇವಾಲಯಗಳ ಗರ್ಭಗೃಹದ ಮೇಲೊಂದು ಕಲಶವಿದ್ದರೆ, ಈ ಹೊಸ ಕಟ್ಟಡಗಳ ಶಿರದಲ್ಲೂ ಅನೇಕ ಮಿನಾರುಗಳೆಂಬ ಕಂಬಗಳ ಶಿಖರಗಳನ್ನೂ ಗೋಲ ಅರ್ಧಗೋಲಾಕೃತಿಗಳನ್ನೂ ಕಾಣಬಹುದು.

ಪಾಶ್ಚಾತ್ಯಸಂಪರ್ಕದಿಂದಾಗಿ ಬ್ರಿಟಿಷರ ಕಾಲದಿಂದ ಇಂದಿನ ವರೆಗೆ ಕಟ್ಟಿಸಲ್ಪಟ್ಟ ಕಟ್ಟಡಗಳಲ್ಲಿ ಆಯಾ ದಿನಗಳಲ್ಲಿ ಇಂಗ್ಲಾಂಡಿನಲ್ಲಿ ರೂಢಿಯಲ್ಲಿದ್ದ ರೀತಿಗಳ ಯಥಾ ಪ್ರತಿಗಳನ್ನೇ ಕಾಣಬಹುದಲ್ಲದೆ ವೈಶಿಷ್ಟ್ಯವಿಲ್ಲ. ಯುರೋಪಿನಲ್ಲಿ ಸಿಮೆಂಟು ಕಾಂಕ್ರಿಟು ವಿದ್ಯುದ್ದೀಪಗಳ ಈ ಯುಗದಲ್ಲಿ ಮನೆಯೊಳಗೆ ಆಧುನಿಕ ವ್ಯವಸ್ಥೆಗಳಿದ್ದರೂ ಹೊರಗಿನ ಆಕಾಶ

ದಲ್ಲಾದರೂ ಪ್ರಾಚೀನತೆ ಉಳಿಯುವಂತೆ ಯತ್ನಿಸುತ್ತಿದ್ದಾರೆ. ನಮ್ಮಲ್ಲಿ ದೇವಸ್ಥಾನಗಳ ಜೀರ್ಣೋದ್ಧಾರವಾಗುವಾಗ ಕೂಡ ಶಿಲ್ಪವನ್ನು ಮರೆತು ಭಂಡಸಾಲೆಯಂತೆಯೋ, ಕಛೇರಿಗಳಂತೆಯೋ ಕಟ್ಟುವುದನ್ನು ಕಾಣುತ್ತೇವೆ.

ಪ್ರತಿಮಾಶಿಲ್ಪದ ಆರಂಭವೂ ಮೊಹೆಂಜೊಡರೋವಿನಲ್ಲಿ ಕಂಡು ಬರುತ್ತದೆ. ಅಲ್ಲಿ ಸಿಕ್ಕಿರುವ ಮಣ್ಣಿನ ಆಕೃತಿಗಳಲ್ಲಿ ಶಾಲು ಹೊದ್ದು ಕೊಂಡು ಗಡ್ಡ ಬೆಳೆಸಿದ ಗಂಡಸಿನ ರುಂಡದಾಕೃತಿ, ತಲೆಗೂದಲನ್ನು ಬಾಚಿ ಕೊಂಡು ನಾಗರತ್ನವನ್ನು ಧರಿಸಿದ ಸ್ತ್ರೀಯ ಆಕೃತಿ, ನಾಟ್ಯಗಾರ್ತಿ, ಬಸವ, ಮಂಗ, — ಹೀಗೆ ಅನೇಕ ತರದ ವಿಗ್ರಹಗಳನ್ನು ಕಾಣಬಹುದು. ಪ್ರತಿಯೊಂದರಲ್ಲೂ ಆ ಕಾಲದ ಗುಡಿಗಾರರ ಹಸ್ತಕೌಶಲ್ಯ ಕಂಡು ಬರುತ್ತದೆ.

ಆರ್ಯರು ಮೂರ್ತಿಪೂಜಕರಲ್ಲವಾದುದರಿಂದಲೋ ಎಂಬಂತೆ ಮೌರ್ಯ ಕಾಲದ ವರೆಗೆ ನಿರ್ಮಿತವಾದ ದೇವ ಪ್ರತಿಮೆಗಳು ಕಾಣಲಿಕ್ಕೇ ಸಿಕ್ಕುವುದಿಲ್ಲ. ಬುದ್ಧನ ಶಿಷ್ಯರು ಮೊದಮೊದಲು ಸ್ತೂಪಗಳನ್ನು ಪೂಜಿ ಸುತ್ತಿದ್ದರು; ಅಥವಾ ಬುದ್ಧನ ಸಾನ್ನಿಧ್ಯವನ್ನು ಸೂಚಿಸಲಿಕ್ಕೆ ಎರಡು ಪಾದ ಗಳನ್ನಾಗಲೀ ಒಂದು ಆನೆ ಅಥವ ಬಸವನನ್ನಾಗಲೀ ಕೆತ್ತುತ್ತಿದ್ದರು. ಸ್ತೂಪದ ಸುತ್ತಲಿನ ಆವರಣ, ದ್ವಾರಗಳ ಸಿಂಗಾರಕ್ಕೆಂದು ಕೆತ್ತಿದ ಬುದ್ಧನ ಕತೆಗಳನ್ನು ನಿದರ್ಶಿಸುವ ಕೆತ್ತನೆಗಳನ್ನೂ ಇತರ ಮೃಗ, ಪಕ್ಷಿ, ಪುಷ್ಪಲತೆ ಗಳ ಕೆತ್ತನೆಗಳನ್ನೂ ಕಾಣಬಹುದು.

ಅಶೋಕನೇ ಬೇರೆಬೇರೆ ಕಡೆಗಳಲ್ಲಿ ಶಿಲಾಸ್ತಂಭಗಳನ್ನು ನೆಟ್ಟು ಅವುಗಳಲ್ಲಿ ತನ್ನ ಶಾಸನಗಳನ್ನು ಕೆತ್ತಿಸಿದನೆಂದು ಗೊತ್ತಾಗಿದೆ. ಸ್ತಂಭ ಗಳ ತುಟಿಯಲ್ಲಿ ಧರ್ಮಚಕ್ರ, ಸಿಂಹ, ಗಜ ವೃಷಭಗಳೂ ಕೆತ್ತಲ್ಪ ಡುತ್ತಿದ್ದುವು. ಅಂಥ ಸ್ತಂಭಗಳಲ್ಲಿ ಸಾರನಾಥದ ಸ್ತಂಭದ ತುದಿಯ ಲ್ಲಿರುವ ರಚನೆಯೇ ಅತ್ಯುತ್ತಮವೆಂದು ಗಣಿಸಲ್ಪಟ್ಟಿದೆ. ಅದನ್ನು ನಮ್ಮ ಸ್ವತಂತ್ರ ಭಾರತದ ಮುದ್ರೆಗಾಗಿ ಈಗ ಉಪಯೋಗಿಸುತ್ತಿದ್ದಾರೆ.

ಭಾರತದ ವಾಯುವ್ಯ ಭಾಗಗಳಲ್ಲಿ ನೆಲೆಸಿ ಭಾರತದ ಜನರೊಡನೆ ಕಲೆತು ಹೋದ ಬೆಕ್ಟ್ರಿಯಾ ಜನರಿಂದಲೇ ಇಲ್ಲಿನ ಮೂರ್ತಿಕಲೆ ಬೆಳೆದು

ಬಂದಿತು. ತಪಸ್ವೀ ಬುದ್ಧ, ಧ್ಯಾನಿ ಬುದ್ಧ, ಧರ್ಮ ಪ್ರಚಾರಕ ಬುದ್ಧ ಹೀಗೆ ಬುದ್ಧನ ನಾನಾ ವಿಧದ ಭಂಗಿಗಳನ್ನು ಸಜೀವ ಮನುಷ್ಯನೇ ಇದಿ ನಿಂತಂತೆ ಭಾಸವಾಗುವ ರೀತಿಯಲ್ಲಿ ಅವರು ಕಲ್ಲಿನ ಪ್ರತಿಮೆಗಳನ್ನಾ ಕೆತ್ತಿದರು. ತಪಸ್ವಿ ಬುದ್ಧನ ಎದೆಗೂಡಿನ ಎಲುಬುಗಳನ್ನು ಎಣಿ ಬಹುದು; ಅಷ್ಟು ಚೊಕ್ಕವಾಗಿ ಸಹಜವಾಗಿ ಕೆತ್ತಿದ್ದಾರೆ. ಈ ಮೂರ್ತಿ ನಿರ್ಮಾಣ ಕಲೆ ಇನ್ನೂ ಉತ್ತಮ ಸ್ಥಿತಿಗೆ ಬಂದುದರ ಫಲವಾಗಿ ಸಾ ನಾಥ, ಬುದ್ಧಗಯೆ, ಮೊದಲಾದ ಕಡೆಗಳಲ್ಲಿ ಅತಿ ಮನೋಹರ ಮೂರ್ತಿ ಗಳನ್ನು ಈಗಲೂ ಕಾಣಬಹುದು.

ಮೂರ್ತಿಶಿಲ್ಪಿಗಳು ಬೌದ್ಧ ವಿಗ್ರಹಗಳನ್ನು ಮಾತ್ರ ರಚಿಸಿ ರೆಂದರೆ ಸರಿಯಾಗದು. ಹಿಂದುಗಳಲ್ಲಿ ವಿಗ್ರಹಾರಾಧನೆಯೂ ಹೆಚ ಪ್ರಚಾರವಾದಾಗ ಹಿಂದೂ ಧರ್ಮದ ಪ್ರತಿಮೆಗಳೂ ಸಿದ್ಧವಾದುವು ಗುಪ್ತರ ಕಾಲದಲ್ಲಿ ಕೆತ್ತಲ್ಪಟ್ಟ ವರಾಹ, ವಾಮನ, ಗಂಗಾವತರ ಕುಬೇರ, ಸರಸ್ವತಿ ಮೊದಲಾದ ಪ್ರತಿಮೆಗಳು ಅಲ್ಲಲ್ಲಿ ದೊರಕಿವೆ.

ದಕ್ಷಿಣ ಭಾರತದಲ್ಲಂತೂ ಮೂರ್ತಿಕಲೆಯ ಮಹಾಸಾಗರವನ್ನೆ ಕಾಣುತ್ತೇವೆ. ಗರ್ಭಗೃಹದಲ್ಲಿಟ್ಟು ಪೂಜಿಸುವ ಮೂರ್ತಿಗಳು ಶಿ ಯವು ಆದರೆ ಉತ್ಸವಾದಿಗಳಿಗಾಗಿ ಲೋಹವನ್ನು ಎರಕಹೊಯ್ದು ಮಾಡಿ ಪ್ರತಿಮೆಗಳನ್ನೂ ಕಾಣುತ್ತೇವೆ. ತಮಿಳುನಾಡಿನಲ್ಲಿ ಹೆಚ್ಚಾಗಿ ದೇವಸ್ಥಾ ಗಳ ಸುತ್ತಲೂ, ಶೃಂಗಾರ ಗೋಪುರಗಳ ಪ್ರತಿಯೊಂದು ಅಂಗುಲವನ್ ಮುಚ್ಚುವಂತೆ ಕೆತ್ತಿದ್ದಾರೆ; ಸಾವಿರಾರು ಪ್ರತಿಮೆಗಳನ್ನೂ ಮಹಾಭಾರ ರಾಮಾಯಣಗಳ ಕತೆಗಳನ್ನೂ ಪುರಾಣಗಳಲ್ಲಿ ವಿವರಿಸಲ್ಪಟ್ಟ ಅನೇಕಾನೇ ದೃಶ್ಯಗಳನ್ನೂ ಭಕ್ತ ವೃಂದವು ಕಣ್ಣಾರೆ ಕಾಣಬೇಕೆಂಬಾಶಯದಿಂದ ಕೆತ್ತಿ ದ್ದಾರೆ. ಉತ್ತರಭಾರತದಲ್ಲಿರುವ ಬುದ್ಧನ ಪ್ರತಿಮೆಗಳಷ್ಟೇ ಜಗದ್ವಿಖ್ಯಾ ದಕ್ಷಿಣ ಭಾರತದ ಶಿಲ್ಪಿಗಳು ನಿರ್ಮಿಸಿದ ನಟರಾಜನ ಪ್ರತಿಮೆಗೂ ಇದೆ.

ಪಾಶ್ಚಾತ್ಯ ದೇಶಗಳ ವಾಸ್ತುಶಿಲ್ಪಕ್ಕೂ ಮೂರ್ತಿಶಿಲ್ಪಕ್ಕೂ ಆದರ್ಶ ಪ್ರಾಚೀನ ಗ್ರೀಕರದು. ಗ್ರೀಕರ ಕಟ್ಟಡಗಳಲ್ಲಿ ಸರಳತೆ, ಸರ ರೇಖೆಗಳೇ ಮುಖ್ಯವಾದರೆ ಭಾರತೀಯರ ವಾಸ್ತು ಶಿಲ್ಪದಲ್ಲಿ ಕೆತ್ತನೆಯೂ ರೇಖೆಗಳ ಒಯ್ಯಾರವೂ ಒಡೆದು ಕಾಣುತ್ತವೆ. ಗ್ರೀಕರ ಮೂರ್ತಿಗಳಲ್ಲ

ದೇವತೆಗಳ ಆಕಾರವು ಮನುಷ್ಯರಂತೆಯೇ ಇದೆ, ರಾಕ್ಷಸರ ಆಕಾರಗಳು ಮಾತ್ರ ನಾನಾ ವಿಧ. ತಮ್ಮ ದೇವ ಪ್ರತಿಮೆಗಳಲ್ಲಿ ಮನುಷ್ಯ ದೇಹದ ಅಂಗಾಂಗಗಳ ಪ್ರತಿಯನ್ನೇ ತೋರಿಸಿ ಮುಖದಲ್ಲಿ ಭಾವನೆಗಳನ್ನು ಮೂಡಿಸುವ ಯತ್ನ ಪಾಶ್ಚಾತ್ಯ ಶಿಲ್ಪಿಗಳದು. ಇಲ್ಲಿನ ಪ್ರತಿಮಾಶಿಲ್ಪಕಾರರು ಶಿಲ್ಪವೆಂಬುದನ್ನು ಚಿತ್ರಲಿಪಿಯಂತೆ ಉಪಯೋಗಿಸಿ ವಿಧವಿಧದ ಭಂಗಿಗಳಿಂದ, ಆಕೃತಿಗಳಿಂದ, ಆಭರಣಗಳಿಂದ ಬೇರೆಬೇರೆ ಕಲ್ಪನೆಗಳನ್ನು ಸೂಚಿಸುವ ಪ್ರಯತ್ನಮಾಡಿದ್ದಾರೆ. ಸರ್ವಶಕ್ತನೆಂದು ತೋರಿಸಬೇಕಾದರೆ ಅನೇಕ ಬಾಹುಗಳಿರಬೇಕು, ಸರ್ವಜ್ಞಾನಿ ಎಂದು ಚಿತ್ರಿಸಲಿಕ್ಕೆ ಹಣೆಗಣ್ಣಿರಬೇಕು, ಆದ್ಯಂತವಿಲ್ಲದವನೆಂದು ಹೇಳಬೇಕಾದರೆ ಕಾಲವನ್ನು ಸೂಚಿಸುವ ಸರ್ಪವನ್ನು ಮೆಟ್ಟಿ ಕುಣಿಯುತ್ತಿರಬೇಕು. ಮೂರ್ತಿ ಲಕ್ಷಣಗಳನ್ನು ವಿವರಿಸುವ ಪ್ರಾಚೀನ ಗ್ರಂಥಗಳನ್ನು ಓದಿದರೆ ಈ ಪ್ರತಿಮೆಗಳಲ್ಲಿ ಕಾಣುವ ಸಂಜ್ಞಾಭಾಷೆ ವಿಶದವಾಗಿ ಶಿಲ್ಪಿಯ ಮನೋಗತ ಸ್ಪಷ್ಟವಾಗುವುದು. ಸಂಜ್ಞೆಗಳ ಗುರುತಿಲ್ಲದೆ ಇವೆಲ್ಲ ವಿಕಾರಮೂರ್ತಿಗಳೆಂಬ ಅಭಿಪ್ರಾಯ ಪಡುವುದು ಮಾತ್ರ ನಮ್ಮ ಮೂಢತೆಯನ್ನೇ ತೋರಿಸಿದಂತಾಗುವುದು. ಭಾರತದ ಮೂರ್ತಿಶಿಲ್ಪದ ವಿಚಾರಮಾಡುವಾಗ ಶ್ರವಣಬೆಳ್ಗೊಳ, ಕಾರ್ಕಳ ಮತ್ತು ವೇಣೂರುಗಳಲ್ಲಿರುವ ಗೊಮ್ಮಟೇಶ್ವರನ 40–50 ಅಡಿಗಳಷ್ಟು ಎತ್ತರದ ಶಿಲಾಮೂರ್ತಿಗಳನ್ನು ಮರೆಯಲಾಗದು. ಒಂದೇ ಕಲ್ಲಿನಲ್ಲಿ ಮಾಡಿದ ಇಂಥ ಭವ್ಯಮೂರ್ತಿಗಳು ಬೇರೆ ಕಡೆಗಳಲ್ಲಿ ಕಂಡುಬರುವುದಿಲ್ಲ.

ಚಿತ್ರಕಲೆಯ ಉಲ್ಲೇಖವು ಪ್ರಾಚೀನ ಗ್ರಂಥಗಳಲ್ಲಿದೆ. ಆದರೆ ಅತಿ ಹಿಂದಿನ ಚಿತ್ರಗಳೆಂದು ನಮಗೆ ಕಾಣಸಿಗುವುವು ಅಜಂತದ ಗುಹಾಲಯಗಳ ಗೋಡೆಗಳ ಮೇಲೆ ಬರೆದ ಚಿತ್ರಗಳು. ಅಜಂತದಲ್ಲಿನ ಚಿತ್ರಗಳಲ್ಲಿ ಚಿತ್ರಕಾರರು ರೇಖೆಗಳನ್ನು ತಮಗೆ ಬೇಕಾದಂತೆ ಒಲಿಸಿ ಕುಣಿಸಿ, ಕಣ್ಣಿಗೆ ತಂಪಾಗಿದ್ದು ಒಂದಕ್ಕೊಂದು ಹೊಂದಿಕೊಳ್ಳುವ ಬಣ್ಣಗಳನ್ನು ಉಪಯೋಗಿಸಿ ಸೌಂದರ್ಯದ ಸೂರೆಗೊಂಡುದನ್ನು ಕಂಡರೆ ಎಷ್ಟೋ ಶತಮಾನಗಳ ಹಿಂದಿನಿಂದಲೂ ಜನರಲ್ಲಿ ಚಿತ್ರಕಲೆಯು ಬೆಳೆದಿತ್ತೆಂದು ಅನುಮಾನಿಸಬಹುದು.

ಮೊಗಲರ ಕಾಲದಲ್ಲಿ ಪ್ರಾಚೀನ ಚಿತ್ರಕಲೆಯೊಂದಿಗೆ ಮಧ್ಯ ಪೂರ್ವದ ವರ್ಚಸ್ಸು ಸೇರಿ ಮೊಗಲರ ಚಿತ್ರಕಲೆಯೆಂದೂ ರಜಪೂತರ ಚಿತ್ರಕಲೆಯೆಂದೂ ಹೊಸದೊಂದು ರೂಪ ತಾಳಿತು. ಈ ಚಿತ್ರಗಳಲ್ಲಿ ಆ ಕಾಲದ ರಾಜರಾಜ್ಞಿಯರ ಚಿತ್ರಗಳನ್ನೂ ಪ್ರಾಚೀನ ಗ್ರಂಥಗಳ ಪದ್ಯಗಳನ್ನು ಉದಾಹರಿಸುವ ಚಿಕ್ಕಚಿಕ್ಕ ಚಿತ್ರಗಳನ್ನೂ ಕಾಣಬಹುದು. ಮನುಷ್ಯರ ಮುಖವನ್ನು ಚಿತ್ರಕಾರರು ಒಂದು ಬದಿಯಿಂದ ನೋಡಿದಂತೆ ಅಥವಾ ಮುಕ್ಕಾಲು ಭಾಗ ಮಾತ್ರ ಕಂಡಂತೆ ಚಿತ್ರಿಸಿದ್ದಾರೆ, ಪೂರ್ಣ ಮುಖ ಕಂಡುಬರುವುದೇ ಇಲ್ಲ.

ಪ್ರಾಚೀನ ಭಾರತದ ಚಿತ್ರಕಲೆಯಲ್ಲಿ ಯುರೋಪಿನ ಮೊದಲಮೊದಲ ಚಿತ್ರಗಳಂತೆಯೇ ಹತ್ತಿರ, ದೂರ, ಘನತೆಗಳನ್ನು ರೂಪಿಸುವಂತಹ ಬೆಳಕು ನೆಳಲುಗಳ ಚಮತ್ಕಾರ ಕಂಡುಬರುವುದಿಲ್ಲ. ಮನೆ, ಮನೆಯ ಬದಿಯಲ್ಲಿ ಯಜಮಾನಿ ನಿಂತಿದ್ದರೆ ಯಾರು ಹಿಂದೆ ಯಾರು ಮುಂದೆ ಎಂದು ತಿಳಿಯುವುದು ಕಷ್ಟವಾಗುವುದು. ಚಿತ್ರವೆಂದರೆ ಚಿತ್ರವೇ ಹೊರತು ಅದರಲ್ಲಿ ಕೆತ್ತಿದ ಮೂರ್ತಿಯ ಕಲ್ಪನೆ ಬರುವುದಿಲ್ಲ! ಮಧ್ಯಯುಗದಿಂದ ಅನಂತರದ ಯುರೋಪಿನ ಚಿತ್ರಗಳಲ್ಲಿ ಘನದ ಕಲ್ಪನೆಯುಂಟಾಗುವಂತೆ ಚಿತ್ರಿಸುವುದು ವಾಡಿಕೆಯಾಯಿತು. ಭಾರತೀಯರ ಚಿತ್ರಕಲೆಯಲ್ಲಿ ಮೂರ್ತಿಕಲೆಯಂತೆಯೇ ಸಂಜ್ಞೆಗಳಿಗೂ ಭಾವನೆಗಳಿಗೂ ಪ್ರಾಧಾನ್ಯವಿದ್ದೆ, ಆದರೆ ಅಂಗಾಂಗಗಳ ಪ್ರಮಾಣವು ಸೃಷ್ಟಿಸಹಜವಾಗಬೇಕೆಂಬ ಧ್ಯಾನವಿಲ್ಲ.

ಪಾಶ್ಚಾತ್ಯ ಸಂಪರ್ಕದಿಂದ ಅಲ್ಲಿನ ಚಿತ್ರಕಾರರ ಅನುಕರಣೆಯೇ ಇಲ್ಲಿಯೂ ಕಂಡುಬಂದು ದೇವದೇವತೆಗಳ ಚಿತ್ರಗಳುಸಹ ಅಂಗಸೌಷ್ಟವ ಅಂಗಾಂಗಗಳ ಪ್ರಮಾಣಗಳಲ್ಲಿ ಮನುಷ್ಯ ದೇಹದ ಹೋಲಿಕೆಗಳು ಬರಬೇಕೆಂದು ತೋರಿತು. ರಾಜಾರವಿವರ್ಮನ ಪುರಾಣ ಚಿತ್ರಗಳಲ್ಲಿ ಪಾಶ್ಚಾತ್ಯರ ಪ್ರಭಾವವನ್ನು ಪೂರ್ಣವಾಗಿ ಕಾಣಬಹುದು. ಆದರೆ ಹೇವೆಲ್ ಮೊದಲಾದ ಪಾಶ್ಚಾತ್ಯರ ಬೋಧನೆಯಿಂದಾಗಿ, ಅಬನೀಂದ್ರ ಠಾಕೂರ, ನಂದಾಲಾಲ ಬಸೂ ಇಂಥವರ ದೇಶಾಭಿಮಾನದ ಫಲವಾಗಿ ಭಾರತೀಯ ಚಿತ್ರಕಾರರು ತಿರುಗಿ ಅಜಂತದ ಚಿತ್ರಗಳಿಂದ ಸ್ಫೂರ್ತಿ ಹೊಂದಿ ತಮ್ಮದೇ ವಿಶಿಷ್ಟ ಸಂಪ್ರದಾಯದ ಚಿತ್ರಗಳನ್ನು ರಚಿಸಿದರು.

ಹೀಗೆ ಒಮ್ಮೆಯೇ ಅಂತರ್ಮುಖವಾದದ್ದು ವಿಪರೀತಕ್ಕೆ ಹೋಯಿತು. ಇತ್ತೀಚೆಗೆ ಜಾನಪದ ಚಿತ್ರಕಲೆ, ಚೀನಾ ಜಾಪಾನುಗಳ ಚಿತ್ರಕಲೆ, ಅಜಂತದ ಕಲೆ, ಪಾಶ್ಚಾತ್ಯರ ಕಲೆಗಳ ಸಮತೋಲ ಮಿಲನದಿಂದ ನೂತನ ಸಂಪ್ರದಾಯುಗಳು ಹುಟ್ಟುತ್ತಿವೆ.

ಶಿಲ್ಪ, ಚಿತ್ರಕಲೆಗಳಂತೆಯೇ ಭಾರತೀಯ ಸಂಗೀತಕ್ಕೂ ಜಗತ್ತಿನಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಭಾರತದ ಆದಿವಾಸಿಗಳ ಜಾನಪದ ಸಂಗೀತವು ಆರೇಳು ಸಾವಿರ ವರ್ಷಗಳ ಹಿಂದೆ ಇದ್ದಂತೆಯೇ ಪ್ರಾಯಶಃ ಈಗಲೂ ಇದೆ. ಅದನ್ನು ಬಿಟ್ಟರೆ ಬೆಳೆಯುತ್ತಾ ಬಂದ ಸಂಗೀತದ ಮೂಲವು ವೇದಗಳಲ್ಲೊಂದಾದ ಸಾಮವೇದದಲ್ಲಿ ಕಾಣಬರುವುದು. ಋಗ್ವೇದದಿಂದಾರಿಸಿದ ಕೆಲವು ಋಕ್ಕುಗಳನ್ನೇ ವಿಶಿಷ್ಟ ರೀತಿಯಲ್ಲಿ ಹಾಡಲಿಕ್ಕಾಗುವಂತೆ ಮಾಡಿದ ಸಂಗ್ರಹವೇ ಸಾಮವೇದವಾಗಿದೆ.

ವೇದಕಾಲದ ಅನಂತರ ಅನೇಕ ಮಂದಿ ಗಾಯಕರೂ ಗಾನಶಾಸ್ತ್ರದ ಕುರಿತು ಬರೆದವರೂ ಆಗಿಹೋಗಿದ್ದಾರೆ. ಆದರೆ ಪದ್ಯಗಳಿಗೊಂದು ರಾಗವನ್ನು ನಿರ್ದೇಶಿಸಿ ಬರೆದ ಗ್ರಂಥಗಳಲ್ಲಿ ಈಗ ಇರುವವುಗಳಲ್ಲಿ 12ನೇ ಶತಮಾನದ ಜಯದೇವನ ಗೀತಗೋವಿಂದವೆಂಬ ಸಂಸ್ಕೃತ ಕೀರ್ತನೆಗಳೇ ಮೊದಲಿನವು. ರಾಧಾಕೃಷ್ಣರ ವಿಲಾಸಗಳನ್ನು ಕಥಾವಸ್ತುವಾಗಿಟ್ಟುಕೊಂಡು ಬರೆದ ಈ ಪದ್ಯಗಳ ಶಬ್ದಾಲಂಕಾರವನ್ನು ಕೇಳಿದರೆ ಅರ್ಥ ತಿಳಿಯದವನೂ ಹಾಡಲಾರದವನೂ ಸಹ ಮುಗ್ಧನಾಗಬೇಕು. "ಲಲಿತ ಲವಂಗ ಲತಾ ಪರಿಶೀಲನ ಕೋಮಲ ಮಲಯ ಸಮೀರೇ" ಎಂಬ ಒಂದು ಪಂಙ್ತಿಯಲ್ಲಿ ನ, ಲಗಳ ನಲಿದಾಟದ ಸೌಂದರ್ಯವೆಷ್ಟು! ಜಯದೇವನ ಗೀತಗೋವಿಂದವನ್ನು ಭಾರತದ ಭಾಷೆಗಳಲ್ಲಿ ಭಾಷಾಂತರಿಸಿದ್ದಾರೆ ಮಾತ್ರವಲ್ಲ, ಇಂಗ್ಲಿಷಿನಲ್ಲೂ ಎಡ್ವಿನ್ ಆರ್ನೋಲ್ಡ್ ಎಂಬವನು ಕವಿತಾ ರೂಪದಲ್ಲೇ ಬರೆದು ಮೂಲದ ಸ್ವರರಂಜನೆಯ ಅನುಕರಣೆ ಮಾಡಿದ್ದಾನೆ.

ಜಯದೇವನ ಕಾಲದ ಅನಂತರವೂ ಅನೇಕಾನೇಕ ಭಕ್ತಕವಿಗಳು ಕೀರ್ತನೆಗಳನ್ನು ಹಾಡಿ ತನ್ಮೂಲಕ ಸಂಗೀತಸೇವೆಯೊಡನೆ ಧರ್ಮ ಪ್ರಚಾರವನ್ನೂ ಮಾಡಿದ್ದಾರೆ. ಉತ್ತರ ಭಾರತದಲ್ಲಿ ಕಬೀರ, ಮೀರಾ

ಬಾಯಿ, ತುಲಸೀದಾಸರೂ ತಮಿಳುನಾಡಿನ ಆಳ್ವಾರರೂ ಆಂಧ್ರರ ತ್ಯಾಗರಾಜರೂ ಕರ್ಣಾಟಕದ ಪುರಂದರ, ಕನಕಾದಿ ದಾಸರೂ, ಮಹಾರಾಷ್ಟ್ರದ ತುಕಾರಾಮ, ನಾಮದೇವಾದಿ ಸಂತರೂ ಸಾವಿರಾರು ಹಾಡುಗಳನ್ನು ರಚಿಸಿದ್ದುದರಿಂದ ಸುಲಭವಾದ ಭಜನಾಪದ್ಯಗಳನ್ನು ಹಾಡಲಾರದ ಭಾರತೀಯನೇ ಇಲ್ಲವೆನ್ನುವಂತಾಗಿದೆ.

ಶಾಸ್ತ್ರೀಯ ದೃಷ್ಟಿಯಿಂದ ಭಾರತದ ಸಂಗೀತದಲ್ಲಿ ಉತ್ತರಾದಿ, ಕರ್ನಾಟಕಗಳೆಂದು ಎರಡು ಮುಖ್ಯ ಭೇದಗಳಿವೆ. ಕರ್ನಾಟಕ ಸಂಗೀತ (ದಕ್ಷಿಣಾದಿ)ದಲ್ಲಿ ಲಯವಿನ್ಯಾಸಕ್ಕೆ ಪ್ರಾಮುಖ್ಯ ಹೆಚ್ಚು; ಉತ್ತರಾದಿಯಲ್ಲಿ ರಾಗಮಾಧುರ್ಯಕ್ಕೆ ಮಹತ್ವವೆಂದು ಹೇಳುತ್ತಾರೆ; ಉತ್ತರಾದಿ ಸಂಗೀತವನ್ನು ಮುಸ್ಲಿಮ್ ಅರಸರು ಸಹ ಪೋಷಿಸಿದುದರಿಂದ ಸಂಗೀತದ ಮಟ್ಟಿಗೆ ಹಿಂದೂ ಸಂಗೀತ ಮುಸ್ಲಿಮ್ ಸಂಗೀತಗಳೆಂಬ ಅಂತರಿಕ ಭೇದಗಳಿಲ್ಲದುದು ಸಂತೋಷದ ಸಂಗತಿ. ತಾನ್‌ಸೇನನು ಉತ್ತರಾದಿ ಸಂಗೀತದಲ್ಲಿ ಪ್ರಖ್ಯಾತವ್ಯಕ್ತಿ. ಕರ್ಣಾಟಕ ಸಂಗೀತದಲ್ಲಿ ತಮಿಳುನಾಡಿನಲ್ಲಿ ನೆಲೆಸಿದ ಭಕ್ತ ತ್ಯಾಗರಾಜರು ಸುಪ್ರಸಿದ್ಧರಾಗಿದ್ದಾರೆ.

ರವೀಂದ್ರನಾಥ ಠಾಕೂರರು ಸ್ವತಃ ಕವಿಗಳಾಗಿದ್ದರಲ್ಲದೆ ಗಾಯಕರೂ ಆಗಿದ್ದು ಭಾರತೀಯ ಗಾನಕ್ಕೆ ಸ್ವರಲಿಪಿಯನ್ನು ಆಧುನಿಕ ರೀತಿಯಲ್ಲಿ ಬರೆಯುವ ದಾರಿ ತೋರಿಸಿದರು. ರವೀಂದ್ರನಾಥರ ಪದ್ಯಗಳಲೂ ಅನಂತರದ ಬಂಗಾಳಿ ಸಂಗೀತದಲ್ಲೂ ಪಾಶ್ಚಾತ್ಯ ಸಂಗೀತದ ಛಾಯೆ ಕಾಣಬರುತ್ತದೆ.

ಇತೀಚೆಗೆ ಚಲಚ್ಚಿತ್ರಗಳ ಗಾನವು ಜನಮನವನ್ನು ಮುಗ್ಧಗೊಳಿಸಿ ಶಾಸ್ತ್ರೀಯ ಸಂಗೀತವೇ ಮೂಲೆಪಾಲಾಗುತ್ತಿದೆಯೆಂಬ ಭಯವನ್ನು ವ್ಯಕ್ತಗೊಳಿಸುವವರಿದ್ದಾರಾದರೂ ಸಂಗೀತಾಭಿಮಾನಿಗಳಲ್ಲೂ ಚಲಚ್ಚಿತ್ರ ನಿರ್ಮಾಪಕರಲ್ಲೂ ವಿಶಾಲ ಹೃದಯ, ದೂರದೃಷ್ಟಿಗಳಿದ್ದರೆ ಎರಡೂ ರೀತಿಯ ಸಂಗೀತಗಳ ಮಿಲನವಾಗಿ ನೂತನ ಸೃಷ್ಟಿಯೊಂದಾಗುವುದು ಸಾಧ್ಯ.

ನೃತ್ಯಕಲೆಯಲ್ಲೂ ಭಾರತವು ಅತಿ ಹಿಂದಿನಿಂದಲೂ ತನ್ನದೇ ಆದ ಒಂದು ದಾರಿಯನ್ನು ಅವಲಂಬಿಸಿಕೊಂಡುಬಂದಿದೆ. ನಾಗರು,

ಸಂತಾಲರು, ಗೊಂಡರು, ಭಿಲ್ಲರು — ಇವರು ಕಾಲಭೇದಗಳಾಗು ವಾಗಲೂ ದೇವ್ವಗಳ ಪೂಜಾದಿಗಳಲ್ಲೂ ಮಾಡುವ ಸಾಮೂಹಿಕ ನರ್ತನ, ಮಲಬಾರಿನ ಕಿಳಿ ಎಂಬ ವೀರನೃತ್ಯ, ಕೊಡಗರ ಹುತ್ತರಿ ಕುಣಿತ ಮೊದಲಾದುವುಗಳು ಭಾರತದ ಜಾನಪದ ನೃತ್ಯಗಳ ನಿದರ್ಶನಗಳು. ಶಾಸ್ತ್ರೀಯ ನೃತ್ಯವೂ ಬಹುಕಾಲದಿಂದ ಬೆಳೆದುಬಂದಿದೆ. ಭರತನೆಂಬ ಋಷಿಯಿಂದಲೇ ಪ್ರಣೀತವಾದುದೆಂದು ಗೌರವಿಸಲ್ಪಡುವ ಭರತನಾಟ್ಯ ದಲ್ಲೂ ಮಲಬಾರಿನ ಕಥಕ್ಕಳಿ ಎಂಬ ಅದರದೇ ಒಂದು ಪ್ರಭೇದದಲ್ಲೂ ಅಂಗಭಂಗಿ ಮತ್ತು ಹಸ್ತಮುದ್ರೆಗಳಿಂದಲೇ ನರ್ತಕನು ತನ್ನ ಮನೋ ಗತವನ್ನು ವ್ಯಕ್ತಪಡಿಸುತ್ತಾನೆ. ಇವಲ್ಲದೆ ಮಣಿಪುರಿ, ಕಥಕ್‌ಗಳೆಂಬ ಇನ್ನೆರಡು ಸಂಪ್ರದಾಯಗಳೂ ಇವೆ. ಪ್ರಾಚೀನ ಕಾಲದಲ್ಲಿ ರಾಜಸ್ತ್ರೀ ಯರು ಕೂಡ ಕಲಿಯುತ್ತಿದ್ದ ನರ್ತನ ಮತ್ತೆ ಕುಲೀನರಲ್ಲದವರ ಕಸಬಾಗಿ ಉಳಿದು ಠಾಕೂರ ಮನೆತನದವರ ಆದರ್ಶದಿಂದ ತಿರುಗಿ ಸಭ್ಯ ಸ್ತ್ರೀ ಪುರುಷರು ಕಲಿಯಬೇಕಾದ ಕಲೆಯೆಂದು ಗಣಿಸಲ್ಪಟ್ಟಿದೆ.

ನಾಟಕಗಳ ಪರಂಪರೆಯೂ ಭಾರತದಲ್ಲಿ ಬಹು ಹಿಂದಿನದೇ. ನಾಟಕದ ಆರಂಭ ಸಾಧಾರಣ ಗುಪ್ತರ ಕಾಲದಲ್ಲಾಯಿತೆನ್ನಬಹುದು. ಸಂಸ್ಕೃತದಲ್ಲಿ ಪರದೆಗೆ ಯವನಿಕಾ ಎಂದು ಹೇಳುವುದನ್ನು ಕೇಳಿದರೆ ಗ್ರೀಕ–ಬಾಕ್ಟ್ರಿಯನರಿಂದ ನಾಟಕದ ರೀತಿಯು ಇಲ್ಲಿ ಆರಂಭವಾಗಿರ ಬೇಕೆಂದು ಎಣಿಸುವುದಿದೆ.

ಭಾಸನೆಂಬ ನಾಟಕಕಾರನು ಅನೇಕ ಏಕಾಂಕ ನಾಟಕಗಳನ್ನು ಬರೆದಿದ್ದನೆಂದೂ ಅವನ ರಚನೆಗಳಲ್ಲಿ ಕೆಲವು ಮಾತ್ರ ಈಗ ಸಿಕ್ಕುತ್ತವೆಂದೂ ಪ್ರತೀತಿಯಿದೆ. ಕಾಳಿದಾಸನ ಅಭಿಜ್ಞಾನ ಶಾಕುಂತಲ, ಶೂದ್ರಕನ ಮೃಚ್ಛಕಟಿಕಾದಿ ನಾಟಕಗಳನ್ನು ಸಾಹಿತ್ಯರತ್ನಗಳಾಗಿ ಗಣಿಸುತ್ತಾರೆಂದು ಹಿಂದೆಯೇ ಪ್ರಸ್ತವಿಸಿದೆ. ಇಂಥ ಉಚ್ಚ ತರದ ನಾಟಕಗಳಲ್ಲದೆ ಸಾಮಾನ್ಯ ಶ್ರೇಣಿಯ ಅನೇಕ ನಾಟಕಗಳೂ ಏಕಾಂಕ ನಾಟಕಗಳೂ ಇಬ್ಬರೇ ಪಾತ್ರವಹಿಸುವ ಸಂವಾದಗಳೂ ಒಬ್ಬರೇ ಪಾತ್ರವಹಿಸಿ ತನ್ನ ಮಾತು ಗಳನ್ನೂ ಇತರರ ಮಾತುಗಳನ್ನೂ ಆಡುವ ಕ್ರಮಗಳೂ – ಹೀಗೆ ನೂರಾರು ರಚನೆಗಳಿವೆ.

ಸಂಸ್ಕೃತ ನಾಟಕಗಳ ಭಾಷಾಂತರದಿಂದಾರಂಭವಾದ ಪ್ರಾದೇಶಿಕ ನಾಟಕಗಳು ಅಲ್ಲಲ್ಲಿನ ಸಾಹಿತಿಗಳಿಗೆ ಆದರ್ಶಗಳಾಗಿ ಅನೇಕ ನಾಟಕಗಳ ಜನನಕ್ಕೆ ಕಾರಣವಾಯಿತು. ಪೌರಾಣಿಕ ಕತೆಗಳೇ ಕಥಾವಸ್ತುಗಳಾದ ನಾಟಕಗಳು ಆರಂಭದಲ್ಲಿದ್ದರೂ ಇಂಗ್ಲೀಷು ಸಾಹಿತ್ಯದ ಪ್ರಭಾವದಿಂದ ರಾಜಕೀಯ, ಸಾಮಾಜಿಕ ನಾಟಕಗಳೂ ರಚಿಸಲ್ಪಟ್ಟವು. ಸಂಗೀತ ನಾಟಕಗಳೇ ಹೆಚ್ಚಿನ ಮಟ್ಟಿಗೆ ಕಂಡುಬಂದರೂ ಗದ್ಯನಾಟಕಗಳು, ಗೀತನಾಟಕಗಳು, ಮೂಕನಾಟಕಗಳು, ಛಾಯಾನಾಟಕಗಳೆಂದು— ವಿಧವಿಧದ ನಾಟಕಗಳಲ್ಲಿ ನಾಟಕಕಾರರು ಪ್ರಯೋಗವಮಾಡಿಗುತ್ತಾರೆ.

ಸಾಮಾಜಿಕ ನಾಟಕಗಳ ಕಥಾವಸ್ತುವು ವರದಕ್ಷಿಣೆ, ಮದ್ಯಪಾನ, ಜಾತಿಭೇದ ಇವುಗಳಿದ್ದಂತೆ ರಾಜಕೀಯದಲ್ಲಿ ಪರದಾಸ್ಯದ ವಿರುದ್ಧ ಹೋರಾಟವು ಮುಖ್ಯವಸ್ತು. ಬ್ರಿಟಿಷರ ಆಳ್ವಿಕೆಯನ್ನು ಖಂಡಿಸುವ ನಾಟಕಗಳು ಪ್ರದರ್ಶಿಸಲ್ಪಡದಿದ್ದರೂ ಬ್ರಿಟಿಷ್ ತೋಟದೊಡೆಯರ ಕಾಲಡಿಯಲ್ಲಿ ಭಾರತೀಯರು ಬಳಲುತ್ತಿದ್ದುದನ್ನು ವರ್ಣಿಸುವ "ನೀಲ ದರ್ಪಣ"ವೆಂಬ ಬಂಗಾಳಿ ನಾಟಕವು ಒಂದು ರೀತಿಯ ಚಳವಳಿಗೆ ಕಾರಣವಾಯಿತು. ರಾಜಸ್ಥಾನದ ಮತ್ತು ಸಿಕ್ಖವೀರರ ಕತೆಗಳ ರೂಪದಲ್ಲಿ ದೇಶಭಕ್ತಿಯನ್ನು ಸಾರುವ ನಾಟಕಗಳು ಹಲವಾರು ಈಗಲೂ ಇವೆ.

ನಾಟ್ಯ, ಅಭಿನಯಗಳೆರಡನ್ನೂ ಸೇರಿಸಿ ಜನಸಾಮಾನ್ಯರ ವಿನೋದಕ್ಕಾಗಿ ರಚಿತವಾದ, ಕನ್ನಡನಾಡಿನ ಯಕ್ಷಗಾನ, ಬಯಲಾಟಗಳಂತೆಯೇ ಇತರ ಭಾಗಗಳಲ್ಲೂ ಬೊಮ್ಮಲಾಟ, ರಾಮಲೀಲೆಗಳೆಂಬ ಬಯಲಾಟಗಳೂ ಇವೆ. ಇತ್ತೀಚೆಗೆ ಚಲಚ್ಚಿತ್ರ ಗೃಹಗಳು ಚಿಕ್ಕ ಊರುಗಳಲ್ಲಿಯೂ ಸ್ಥಾಪಿತವಾಗಿ, ಸಾಲದುದಕ್ಕೆ ಚಲಿಸುವ ಪ್ರದರ್ಶಕರೂ ಇರುವುದರಿಂದ ನಾಟಕ, ಬಯಲಾಟಗಳ ಆಕರ್ಷಣ ಕಡಿಮೆಯಾಗಿದೆ, ಕಲೆಗಳ ಪೋಷಕರು ನಾಟಕವನ್ನು ಪೋಷಿಸಿ ವಿದ್ಯಾಸಂಸ್ಥೆಗಳ ಮೂಲಕ ಉಚ್ಚತರ ಅಭಿನಯವನ್ನು ಪ್ರದರ್ಶಿಸದಿದ್ದರೆ ನಾಟಕಾದಿಗಳ ಮಟ್ಟವನ್ನು ಜನರಲ್ಲಿ ಪ್ರಚಾರಮಾಡದಿದ್ದರೆ ಸುಸಂಸ್ಕೃತ ಜನರ ಲಕ್ಷಣವೇ ಉಳಿಯದಂತಾಗಬಹುದು.



# ೬. ಧರ್ಮದರ್ಶನ

ಹಾಡುಗಾರಿಕೆ, ನೃತ್ಯ, ಚಿತ್ರಶಿಲ್ಪ, ಕಾವ್ಯ, ಮೊದಲಾದ ರೂಪಗಳಲ್ಲಿ ಮಾನವರು ಸೌಂದರ್ಯೋಪಾಸನೆ ಮಾಡುತ್ತಿದುದು ಹೇಗೆ ಅನಾದಿಯಿಂದ ನಡೆದು ಬಂದಿದೆಯೋ ಅದೇ ರೀತಿ ಅಧ್ಯಾತ್ಮ, ಧರ್ಮ, ನೀತಿಗಳ ವಿವೇಚನೆಗಳೂ ಅನಾದಿಯಿಂದಲೇ ಮೂಡಿಬಂದವುಗಳು. ಹೊಟ್ಟೆಯ ಪಾಡಿಗಾಗಿ ಹಗಲಿಡೀ ದುಡಿಯುತ್ತಿದ್ದಾಗಲೂ ಸಹ ಆರ್ಥಿಕ ಸಂಕಷ್ಟದಲ್ಲಿ ಮುಗ್ನರಾಗಿದ್ದ ಕಾಲಗಳಲ್ಲೂ ಕೂಡ ಭಾರತೀಯರು ತಮ್ಮ ಸಂಸ್ಕೃತಿ ಮತ್ತು ಧರ್ಮಗಳನ್ನು ಸಂಪೂರ್ಣ ಮರೆತಿದ್ದಿಲ್ಲವೆನ್ನಬಹುದು.

ತನ್ನ ಸುತ್ತಲಿನ ಸೃಷ್ಟಿಯ ಕುರಿತು ಗಹನ ವಿಚಾರ ಮಾಡುವಾಗ ಒಂದೊಂದೇ ಪ್ರಶ್ನೆಯನ್ನೆತ್ತಿ ಅನ್ವೇಷಿಸಿ, ಪ್ರಯೋಗಗಳನ್ನು ಮಾಡಿ ಪ್ರತಿಯೊಂದರ ನಿಜರೂಪ, ನಿಜಕಾರಣಗಳನ್ನು ಕಂಡು ಹಿಡಿಯುವುದೇ ವಿಜ್ಞಾನ; ಹಲವಾರು ರೀತಿಯ ಬೇರೆ ಬೇರೆಯಾಗಿ ಕಂಡು ಬರುವ, ಈ ಸಿದ್ಧಾಂತಗಳ ಮೂಲವಾವುದು, ಇಡಿ ಸೃಷ್ಟಿಯಲ್ಲೇ ವ್ಯಾಪಕವಾದ ಸತ್ಯವಾವುದು ಎಂದು ವಿಚಾರಮಾಡುತ್ತ ಹೋಗುವುದೇ ತತ್ವಶಾಸ್ತ್ರ; ಈ ಸೃಷ್ಟಿಯಲ್ಲಿ ತನ್ನ ಸ್ಥಾನ ಯಾವುದು, ತನಗೂ ಅದಕ್ಕೂ ಇರುವ ಸಂಬಂಧವೇನೆಂದು ಮಾಡುವ ವಿಚಾರವೇ ಧರ್ಮ; ತನಗೂ ಇತರರಿಗೂ ಇರುವ ಸಂಬಂಧದ ಪ್ರಶ್ನೆಯೇ ನೀತಿ. ವಿಚಾರದಿಂದಾಗಲೀ ಅನುಕರಣೆಯಿಂದಾಗಲೀ ಬಾಲ್ಯಕಾಲದ ಅಭ್ಯಾಸಬಲದಿಂದಾಗಲೀ ಈ ಪ್ರಶ್ನೆಗಳ ಕುರಿತು ವಿಚಾರಿಸುವ ಇಲ್ಲವೆ ಒಂದು ತೀರ್ಮಾನಕ್ಕೆ ಬಂದಂತೆ ಕೃತಿಯಲ್ಲಿ ತೋರಿಸುವ ಪ್ರಯತ್ನಗಳು ಎಲ್ಲೆಲ್ಲಿಯೂ ಕಂಡುಬರುತ್ತವೆ.

ಭಾರತೀಯರ ಧರ್ಮಚಿಂತನೆಯ ಆದಿರೂಪವನ್ನು ಈಗಲೂ ನಮ್ಮ ಆದಿವಾಸಿಗಳ ಆಚರಣೆಗಳಲ್ಲಿ ಕಾಣಬಹುದು. ಹಗಲು-ಇರುಳು, ಚಳಿ-ಮಳೆ, ಬೆಳೆ-ಬರಡು, ರೋಗ-ರುಜೆ, ಹುಟ್ಟು-ಸಾವು, ಸೋಲು-ಗೆಲುವು— ಪ್ರತಿಯೊಂದೂ ಅದೃಶ್ಯ ಶಕ್ತಿಗಳಿಂದಾಗುವುದು; ಅವುಗಳನ್ನು ಪೂಜೆಯಿಂದ, ನೈವೇದ್ಯದಿಂದ, ಬಲಿಯಿಂದ ಒಲಿಸಬಹುದು, ತೃಪ್ತಿಗೊಳಿಸಬಹುದು;

ಮನುಷ್ಯರಂತೆಯೇ ಆ ಶಕ್ತಿಗಳಿಗೆ ಕ್ರೋಧ, ಸಂತೋಷ, ವೈರ, ಕರುಣೆ, ಇಚ್ಛೆ, ಅನಿಚ್ಛೆಗಳಿವೆ; ನಮಗೆ ರುಚಿಸುವ ವಸ್ತು—ನಮ್ಮ ಆಹಾರ, ನಮ್ಮ ಹೊದಿಕೆ, ನಮ್ಮ ಆಭರಣ, ನಮ್ಮ ಸಂಗೀತ–ಅವುಗಳಿಗೂ ರುಚಿಸುತ್ತವೆ. ಈ ಶಕ್ತಿಗಳು ಅದೃಶ್ಯರೂಪದಿಂದ ಎಲ್ಲೆಲ್ಲಿಯೂ ಅಲೆದಾಡಿದರೂ ನಿಶ್ಚಿತವಾದ ಮರ, ಕಲ್ಲು, ಸ್ಥಳಗಳಲ್ಲಿ ಬಲಿಕೊಟ್ಟರೆ, ಹರಕೆ ಹೊತ್ತರೆ ಅವುಗಳಿಗೆ ಸಲ್ಲುತ್ತದೆ; ಇಂಥ ಅದೃಶ್ಯ ಶಕ್ತಿಗಳೊಂದಿಗೆ ಬಳಗದಲ್ಲಿ ಮರಣಪಟ್ಟವರ ಪ್ರೇತಗಳೂ ಸೇರಿಕೊಂಡಿದ್ದು ಕೆಲಕಾಲವಾದರೂ ಬಳಗವನ್ನಾಳುವುದರಿಂದ ಅವುಗಳಿಗೂ ಶನಿ ಇಟ್ಟು ತೃಪ್ತಿಗೊಳಿಸಬೇಕು; ಇವುಗಳೆಲ್ಲ ಅವರಲ್ಲಿರುವ ಕಲ್ಪನೆಗಳು.

ಸೌಂದರ್ಯ, ಭವ್ಯತೆಗಳ ಕಲ್ಪನೆಯ ಅಂಶ ಹೆಚ್ಚಿದ್ದರೂ ಸಾಧಾರಣ ಇದೇ ವರ್ಗಕ್ಕೆ ಸೇರಿದ ಧರ್ಮಾಚರಣೆಯು ಆರ್ಯರಲ್ಲಿತ್ತೆಂದು ವೇದಮಂತ್ರಗಳಿಂದ ತಿಳಿದುಬರುತ್ತದೆ. ಮುಂಬೆಳಕೆಂದರೆ ಸುಂದರಿಯಾದ ಅಮರ ಸ್ತ್ರೀ, ಅವಳನ್ನು ಹಿಂಬಾಲಿಸಿ ಅರುಣೋದಯ, ಅರುಣನು ನಡೆಸುವ ಬಂಗಾರದ ರಥದಲ್ಲಿ ಸೂರ್ಯನು ಬರುತ್ತಾನೆ, ಆ ರಥಕ್ಕೆ ಒಂದೇ ಗಾಲಿ, ಏಳು ಕುದುರೆಗಳು; ಸೃಷ್ಟಿಯಲ್ಲಿ ಕಾಣುವ ದೃಶ್ಯದ ಎಂಥ ಸುಂದರ ಚಿತ್ರ! ಇದರಲ್ಲಿ ಉಷೆ, ಅರುಣ, ಸೂರ್ಯ—ಇವರೆಲ್ಲ ಬರೀ ಕವಿಕಲ್ಪನೆಗಳಾಗಿ ಉಳಿಯದೆ ಪೂಜಾಯೋಗ್ಯರಾದ ಅಮಾನುಷ ವ್ಯಕ್ತಿಗಳಾಗಿದ್ದರು. ಇದೇ ರೀತಿಯಲ್ಲಿ ಹಗಲು, ಇರುಳು, ಮಳೆ, ನದಿ, ಸಮುದ್ರ, ಅರಣ್ಯ—ಎಲ್ಲವುಗಳಲ್ಲಿಯೂ ಅತಿಮಾನುಷ ಶಕ್ತಿಗಳ ಸಾನಿಧ್ಯ ಕಂಡು ಪೂಜೆ ಮಾಡುವುದು ಆರ್ಯಧರ್ಮದ ಮೊದಲನೆಯ ಹಜ್ಜೆ.

ಆರ್ಯರ ಪೂಜಾವಿಧಾನ ಮಾತ್ರ ಬೇರೆ. ಸ್ತುತಿಪಾಠಗಳನ್ನು ಮಂತ್ರಾದಿಗಳಿಂದ ಮಾಡುವುದೊಂದು, ಅಗ್ನಿಯಲ್ಲಿ ಆಹಾರ ದ್ರವ್ಯಗಳನ್ನು ಹಾಕಿ ಉರಿಸಿ ಅರ್ಪಿಸುವ ರೀತಿಯೊಂದು. ಪ್ರತಿಯೊಬ್ಬ ಆರ್ಯನೂ ಪ್ರಾಂತಃ ಸಾಯಂಕಾಲಗಳಲ್ಲಿ ಸೂರ್ಯನ ಆರಾಧನೆಯನ್ನು (ಸಂಧ್ಯಾವಂದನೆ) ಮಾಡಬೇಕಲ್ಲದೆ ಮನೆಯಲ್ಲಿ ಅದಕ್ಕೇನೇ ಮೀಸಲಾಗಿರಿಸಿದ ಕೋಣೆಯಲ್ಲಿ ಸದಾಕಾಲ ಒಂದು ಬೆಂಕಿಯನ್ನು ಉರಿಸುತ್ತಿದ್ದು ಪ್ರತಿದಿನ ಅದರಲ್ಲಿ ಹವಿಸ್ಸನ್ನು ಅರ್ಪಿಸಿ ಯಜ್ಞವನ್ನು ಮಾಡಬೇಕಿತ್ತು. ಆರ್ಯ

ರಲ್ಲಿ ವಿವಾಹವು ಅಗ್ನಿಸಾಕ್ಷಿಯಾಗಿ ನಡೆಯಬೇಕು. ವಧೂವರರು ಅಗ್ನಿಯ ಪ್ರದಕ್ಷಿಣೆ ಮಾಡುತ್ತ ಒಬ್ಬರೊಬ್ಬರೊಡನೆ ಹೊಂದಿಕೊಂಡು ಬಾಳ್ವೆ ಮಾಡುವ ಮಾತುಗೊಡಬೇಕು, ವಧುವು ತನ್ನ ಹೊಸ ಮನೆಗೆ ಹೋಗುವಾಗ ಈ ಅಗ್ನಿಯನ್ನು ಒಯ್ಯಬೇಕು, ಅದೇ ಅವಳ ಮನೆಯಲ್ಲಿ ಪ್ರತಿಷ್ಠೆಯಾಗುವ ಗಾರ್ಹಸ್ಥ್ಯಾಗ್ನಿಯಾಗಬೇಕು. ಒಬ್ಬರು ಸತ್ತರೆ ಅದೇ ಅಗ್ನಿಯನ್ನು ತಂದು ಚಿತೆಯುರಿಸಿ ದಹನವಾಗಬೇಕು. ಹೀಗೆ ಆರ್ಯ ಧರ್ಮದಲ್ಲಿ ಅಗ್ನಿಯೇ ಪ್ರಧಾನ.

ಈ ರೀತಿಯ ಧರ್ಮ ಬೆಳೆಯುತ್ತಾ ಬಂದಂತೆ ಒಂದು ಕಡೆಯಿಂದ ಯಜ್ಞಗಳ ಆಡಂಬರ, ಯಜ್ಞಕಾಲದಲ್ಲಿರಬೇಕಾದ ಪುರೋಹಿತರ ಸಂಖ್ಯೆ, ಅವುಗಳಿಗೆ ತಗಲುವ ಖರ್ಚು ಇವು ಹೆಚ್ಚುತ್ತಾ ಬಂದುವು. ಇನ್ನೊಂದೆಡೆಯಲ್ಲಿ ಆರ್ಯ ಋಷಿಗಳು ತತ್ವ ವಿಚಾರ ಮಾಡುತ್ತ ಬಂದು ಅಗ್ನಿ, ಇಂದ್ರ, ವಾಯು ವರುಣರೆಂದು ತಾವು ಹೇಳುವ ಶಕ್ತಿಗಳೆಲ್ಲ ಒಂದೇ ಪರಾಶಕ್ತಿ, ಕವಿಗಳು ಮಾತ್ರ ಬೇರೆಬೇರೆ ಹೆಸರುಗಳಿಂದ ಅವನ್ನು ಹೊಗಳುತ್ತಾರೆ ಎಂಬ ನಿಶ್ಚಯಕ್ಕೆ ಬಂದರು. ಋಷಿಗಳು ಮಾಡಿದ ತತ್ವ ವಿಚಾರಗಳನ್ನು ಬಹುಮಟ್ಟಿಗೆ ತಂತಮ್ಮ ವಿದ್ಯಾರ್ಥಿಗಳೊಡನೆ ಮಾಡಿದ ಸಂಭಾಷಣೆಗಳ ರೂಪದಲ್ಲಿರುವ, ಅಭಿಪ್ರಾಯಗಳ ನಿದರ್ಶನಗಳಿಗಿರುವ ಕತೆಗಳು—ವೇದಗಳ ಅನುಬಂಧಗಳೆಂದು ಗಣಿಸಲ್ಪಡುವ ಉಪನಿಷತ್ತುಗಳಲ್ಲಿ ಓದಬಹುದು.

ಪರಮಾತ್ಮನೊಬ್ಬನೇ, ಅವನನ್ನು ಅನೇಕ ನಾಮಗಳಿಂದ ಹೊಗಳಬಹುದು, ಅನೇಕ ವಿಧಗಳಿಂದ ಪೂಜಿಸಬಹುದೆಂಬ ತತ್ವವೇ ಭಾರತೀಯರ ನಂಬುಗೆಗಳ ಆಧಾರ ಸ್ತಂಭವಾದ ಕಾರಣ ಆರ್ಯ ಅನಾರ್ಯ ಧರ್ಮ, ಸಂಸ್ಕೃತಿಗಳ ಸಮನ್ವಯಕ್ಕೆ ಅವಕಾಶವಾಯಿತು. ಅನಾರ್ಯರ ದೇವದೇವತೆಗಳಲ್ಲಿ ವೇದಗಳಲ್ಲಿ ಹೊಗಳಲ್ಪಟ್ಟ ರುದ್ರ, ವಿಷ್ಣು, ಶಕ್ತಿಗಳ ಪಡಿನೆಳಲನ್ನು ಆರ್ಯರು ಕಂಡು, ಆರ್ಯರು ಕೊಟ್ಟ ವರ್ಣನೆ ಮತ್ತು ಕತೆಗಳು ಅನಾರ್ಯರಿಗೆ ಮೆಚ್ಚುಗೆಯಾಗಿ, ನಾನಾ ದೇವತೆಗಳ ಹೆಸರುಗಳಲ್ಲಿ ಬದಲಾವಣೆಯೂ ಒಂದಕ್ಕೊಂದು ಹೊಂದಿಕೆಯಿಲ್ಲವೆಂಬಂತಿರುವ ಸ್ತುತಿ ಮಹಿಮಾ ಗ್ರಂಥಗಳೂ ರಚಿತವಾದುವು. ಒಂದರಲ್ಲಿ ಶಕ್ತಿಯು

ಮಕ್ಕಳೇ ತ್ರಿಮೂರ್ತಿಗಳೆಂದಿದ್ದರೆ ಇನ್ನೊಂದರಲ್ಲಿ ಶಿವನೇ ಸರ್ವಮೂ ನೆಂದೂ ಮತ್ತೊಂದರಲ್ಲಿ ವಿಷ್ಣುವೇ ಮೂಲ ಪುರುಷನೆಂದೂ ವರ್ಣಿಸ ಡಲಿಕ್ಕೆ ಕಾರಣವೂ ಆಯಿತು. ಆಯಾ ಕವಿ, ಆಯಾ ಭಕ್ತ ತ ಇಷ್ಟದೇವತೆಯನ್ನು ಹೇಗೆ ಹೊಗಳಿದರೂ ಹೇಗೆ ಪೂಜಿಸಿದರೂ ಅವನ ಪೀಡಿಸುವವರೂ ಬಹಿಷ್ಕರಿಸುವವರೂ ಇಲ್ಲದಂತಾಗಿ ಧರ್ಮದ ಮಟ್ಟಿ ವ್ಯಕ್ತಿ ಸ್ವಾತಂತ್ರ್ಯ ಭದ್ರವಾಗಿ ನೆಲೆಯೂರಿತು.

ವ್ಯಕ್ತಿಸ್ವಾತಂತ್ರ್ಯ, ವಿಚಾರಸ್ವಾತಂತ್ರ್ಯಗಳ ಪರಿಣಾಮವಾಗಿ, ಆಯ ಧರ್ಮದಲ್ಲಿ ಬೆಳೆದು ಬಂದ ಯಜ್ಞಯಾಗಾದಿಗಳು ಮೋಕ್ಷಸಾಧನಗಳ ವೆಂಬ ವಾದವೂ ಎದ್ದು ಕಿ. ಪೂರ್ವ ಆರನೇ ಶತಮಾನದಲ್ಲಿ ಅನೇಕ ತಪಸ್ಸಿನ ಮೂಲಕ, ದೇಹದಂಡನೆಯ ಮೂಲಕ ಸ್ವರ್ಗಪ್ರಾಪ್ತಿಯಾಗು ದೆಂದು ಬೋಧಿಸತೊಡಗಿದರು. ಆ ಕಾಲದ ಪ್ರಚಾರದಲ್ಲಿ ಅನೇಕಾನೇ ತಪ್ಪಸ್ವಿಗಳೂ ಅವರ ಪಂಥದವರೂ ಇದ್ದರು. ಒಂದು ಜಡೆಯವರ ಎರಡು ಜುಟ್ಟಿನವರು, ಕೂದಲನ್ನು ಕಾಡಿನಂತೆ ಬೆಳೆಸಿದವರು, ಭಸ್ಮಧಾ ಗಳು, ತಲೆಯಲ್ಲಿ ಅಗ್ನಿಪಾತ್ರೆಯನ್ನಿಟ್ಟುಕೊಂಡು ಧ್ಯಾನಮಾಡುವವ ಒಂದೇ ಕಾಲಲ್ಲಿ ನಿಂತು ತಪಸ್ಸು ಮಾಡುವವರು— ಹೀಗೆ ಅನೇ ಕ್ರಮಗಳನ್ನಿಟ್ಟುಕೊಂಡು ಮೋಕ್ಷಸಾಧನೆಯನ್ನು ಹುಡುಕುವ ಪಂಥ ವರಿದ್ದರು.

ಆ ಪಂಥಗಳಲ್ಲಿ ಮಹಾವೀರನ ಜೈನಪಂಥವೂ ಬುದ್ಧನ ಬೌ ಮತವೂ ವಿಶೇಷ ಪ್ರಚಾರವಾದುವು. ಅಹಿಂಸೆಯ ಬೋಧನೆ ಎರ ರಲ್ಲಿಯೂ ಕಂಡುಬಂದರೂ ಜೈನ ಬೋಧನೆಯಲ್ಲಿ ಅದಕ್ಕೆ ಹೆಚ್ಚಿ ಮಹತ್ವವಿದ್ದಂತೆ ತೋರುತ್ತದೆ. ಜೈನ ಬೋಧೆಯಲ್ಲಿ ತಪಸ್ಸಿಗೆ ಬೆ ಹೆಚ್ಚು, ದಿಗಂಬರರಾಗಿ ದೇಹದಂಡಿಸುವ ವಿರಕ್ತಿಗಳಿಗೆ ವಿಶಿಷ್ಟ ಸ್ಥಾನವಿ ಬುದ್ಧನ ವಚನಗಳಲ್ಲಿ ಮಧ್ಯ ಮಾರ್ಗ ಎಂದರೆ ಅತಿ ಕಠಿನ ತಪಸ ಕೂಡದು, ವಿಷಯಾಸಕ್ತಿಯೂ ಕೂಡದೆಂಬ ತತ್ವಕ್ಕೆ ಮಹತ್ವವಿದೆ.

ಜೈನ, ಬುದ್ಧ ಧರ್ಮಗಳಿಂದಾಗಿ ಪ್ರಾಚೀನಕಾಲದ ಅಜಮೇ ಅಶ್ವಮೇಧಾದಿ ಯಜ್ಞಗಳು ಇಲ್ಲವಾದುವು. ಪ್ರಾಣಿಬಲಿಯು ತೀ ಅವಿದ್ಯಾವಂತರಲ್ಲಿ ಉಳಿದುಬಂದರೂ ಮೇಲ್ಮಟ್ಟದವರು ಅದನ್ನು ತ್ಯಜಿ



ಸಾರನಾಥದ ಧ್ಯಾನಮಗ್ನ ಬುದ್ಧಮೂರ್ತಿ.

ಶ್ರವಣಬೆಳ್ಗೊಳದ ಗೊಮ್ಮಟನ ಭವ್ಯ ಮೂರ್ತಿ.



ಹಣ್ಣುಕಾಯಿ, ಧೂಪದೀಪ, ಆರತಿ, ಅಕ್ಷತೆ, ಫಲಪತ್ರಗಳಿಂದ ಪೂಜೆ ಮಾಡುವುದು ರೂಢಿಯಾಯಿತು. ಹಿಂದಿನ ಕಾಲದ ಆರ್ಯರಲ್ಲಿ ಪ್ರತಿಯೊಬ್ಬರೆಂಬಂತೆ ಋಷಿಗಳು ಸಹ ಗೃಹಸ್ಥರಾಗಿ ಕುಟುಂಬವನ್ನು ಪೋಷಿಸಿ ವೃದ್ಧಾಪ್ಯದಲ್ಲಿ ಮಾತ್ರ ಯತಿಗಳಾಗುತ್ತಿದ್ದರು; ಬೌದ್ಧ ಧರ್ಮದಲ್ಲಿ ಬುದ್ಧನಂತೆ ಹೆಂಡತಿ ಮಕ್ಕಳನ್ನು ಬಿಟ್ಟು ಓಡಿದವರೂ ಅವಿವಾಹಿತರೂ ಭಿಕ್ಷುಗಳಾಗಿ, ಭಿಕ್ಷುಣಿಯರಾಗಿ ಸೇರಿ ಮತಪ್ರಚಾರದ ಕೆಲಸ ರಭಸದಿಂದ ಸಾಗಿತು. ಅಶೋಕನ ಆಶ್ರಯ, ಅನಂತರ ಕಣಿಷ್ಕನ ಪ್ರೋತ್ಸಾಹದಿಂದಾಗಿ ಬೌದ್ಧ ಧರ್ಮವು ಸಿಂಹಳ, ಬ್ರಹ್ಮದೇಶ, ಮಧ್ಯ ಆಸ್ಯ, ಚೀನಾ ಜಾಪಾನುಗಳ ವರೆಗೆ ವಿಸ್ತರಿಸಿತು.

ಬೌದ್ಧಧರ್ಮದ ಅಹಿಂಸೆ, ಸನ್ಯಾಸಿ ಮಠ, ಮೂರ್ತಿಪೂಜೆಗಳನ್ನು ಪ್ರಾಚೀನ ಮಂತ್ರಾದಿಗಳೊಂದಿಗೆ ಸಮನ್ವಯಿಸಿಕೊಂಡು ದೇವಸ್ಥಾನಗಳನ್ನು ಕಟ್ಟಿ, ಉತ್ಸವಾದಿಗಳನ್ನು ಜರಗಿಸಿ, ದೇವದೇವತೆಗಳ ಕತೆಗಳನ್ನೇ ಕಾವ್ಯಪುರಾಣಗಳನ್ನಾಗಿ ಬರೆದು ಪ್ರಸಾರಿಸಿ, ಬೌದ್ಧಧರ್ಮವು ನಾಮಾವಾಶೇಷವಾಗುವಂತೆ ಬೆಳೆದು ಬಂದ ಧರ್ಮವಿಶೇಷವನ್ನು ನಾವು ಹಿಂದೂಧರ್ಮವೆಂದು ಸಂಬೋಧಿಸಬಹುದು.

ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಹಿಂದುಸ್ಥಾನ, ಹಿಂದೂಧರ್ಮ ಎಂಬ ಪದಗಳೇ ಕಾಣಲು ಸಿಕ್ಕುವುದಿಲ್ಲ. ಆರ್ಯಾವರ್ತ, ದಕ್ಷಿಣಾಪಥಗಳೆಂದು ಮುಖ್ಯ ಭಾಗಗಳಿಗೆ, ಭರತಖಂಡವೆಂದು ಇಡಿಯ ದೇಶಕ್ಕೆ ಹೆಸರನ್ನು ಇಟ್ಟಿದ್ದಾರೆ. ಸಂಸ್ಕೃತದಲ್ಲಿ ಸಿಂಧೂ ಎಂದು ಕರೆಯಲ್ಪಡುತ್ತಿದ್ದ ನದಿಯನ್ನು ಪರ್ಶಿಯಾ ದೇಶದವರು ತಮ್ಮ ಭಾಷೆಯಲ್ಲಿ ಹಿಂದೂ ಎಂದೂ ಸಿಂಧೂ ತೀರವಾಸಿಗಳನ್ನು ಹಿಂದುಗಳೆಂದೂ ಕರೆದು ಅದೇ ಗ್ರೀಕರ ಭಾಷೆಯಲ್ಲಿ ಇಂದ್ ಎಂದಾಗಿ ಇಂಡಿಯಾವೆಂದು ಯುರೋಪಿನಲ್ಲಿ ಪ್ರಚಾರವಾಯಿತೆಂದೂ ಹೇಳುತ್ತಾರೆ. ಸ್ಪೈನ್ ದೇಶದಿಂದ ಹೊರಟ ಕೊಲಂಬಸನು ಇಂಡಿಯಾ ದೇಶವನ್ನು ಹುಡುಕಿಕೊಂಡು ಹೋಗಿ ಹೊಸತೊಂದು ಖಂಡವನ್ನೇ ಕಂಡುಹಿಡಿದನಾದರೂ ತಾನು ಕಂಡುದು ಇಂಡಿ

ಯಾವೆಂದೇ ಅವನು ಭಾವಿಸಿ ಅಲ್ಲಿನ ಆದಿವಾಸಿಗಳನ್ನು ಇಂಡಿಯನರೆಂದು ಕರೆದನಂತೆ. ಈಗಲೂ ಅಮೇರಿಕದವರು ಅಲ್ಲಿನ ಆದಿವಾಸಿಗಳ ವಂಶಜರನ್ನು ಇಂಡಿಯನರೆಂದೂ ಭಾರತೀಯರನ್ನೆಲ್ಲ ಯಾವ ಮತದವರೇ ಇರಲಿ ಹಿಂದುಗಳೆಂದೂ ಸಂಬೋಧಿಸುತ್ತಾರೆ.

ದೇಶದೊಳಗಿನ ಜನರು ತಮ್ಮ ನಾಡಿಗೆ ಕೊಡುವ ಹೆಸರೊಂದು, ಹೊರಗಿನವರು ಇಡುವ ಹೆಸರು ಬೇರೊಂದಾಗುವ ಭಾಗ್ಯವು ನಮ್ಮ ಪಾಲಿನದು ಮಾತ್ರವಲ್ಲ; ಸ್ವಜನರಿಂದ ಡ್ಯೂಶ್‌ಲೆಂಡ್ ಎಂದು ಕರೆಯಲ್ಪಡುವ ದೇಶವನ್ನು ನಾವು ಜರ್ಮನಿ ಎನ್ನುತ್ತೇವೆ, ಅಲೆಮಾನಿಯಾನ್ನು ಸ್ವಿಜರ್ಲೆಂಡೆನ್ನುತ್ತೇವೆ.

ಹೀಗೆ ಪುನರ್ಜೀವನ ಹೊಂದಿದ ಧರ್ಮವನ್ನು ಪ್ರಾಚೀನ ರೀತಿಯಲ್ಲಿ ಸನಾತನ ಧರ್ಮವೆನ್ನಬೇಕೋ ಹಿಂದೂ ಧರ್ಮವೆನ್ನಬೇಕೋ ಎಂದು ಚರ್ಚೆ ಮಾಡುವ ಅವಶ್ಯವಿಲ್ಲ. ಯಾವುದೇ ಕಾರಣದಿಂದಿರಲಿ, ರೂಢಿಯಲ್ಲಿರುವ ಹೆಸರನ್ನು ಬಿಟ್ಟುಬಿಡುವ ಅಗತ್ಯವಿಲ್ಲ.

ಆರ್ಯಧರ್ಮವು ಅನಾರ್ಯಧರ್ಮದೊಂದಿಗೆ, ಅನಂತರ ಇಲ್ಲಿಯೇ ಹುಟ್ಟಿ ಬೆಳೆದ ಬೌದ್ಧಧರ್ಮದೊಂದಿಗೆ ಬೆರೆತು ಒಂದು ರೀತಿಯ ವಿಶಾಲತೆ, ನವ ಯೌವನಗಳನ್ನು ಹೊಂದಿತಾದರೂ ಇನ್ನೊಂದು ರೀತಿಯಲ್ಲಿ ಭಾರತದಲ್ಲಿ ಭೇದಗಳೂ ನಿರ್ಬಲತೆಯೂ ಬೆಳೆಯಲಿಕ್ಕೆ ಕಾರಣವಾಯಿತು. ಆರ್ಯರಲ್ಲಿ ವೇದ ವೇದಾಂಗಗಳಲ್ಲಿ ನಿರತರಾದವರನ್ನು ಬ್ರಾಹ್ಮಣರೆಂದೂ, ರಾಜ್ಯಪಾಲನ ಯುದ್ಧಕಾರ್ಯಗಳಲ್ಲಿ ತೊಡಗಿದವರನ್ನು ಕ್ಷತ್ರಿಯರೆಂದೂ, ಕೃಷಿ, ವ್ಯಾಪಾರಗಳಲ್ಲೇ ತೊಡಗಿರುವವರನ್ನು ವೈಶ್ಯರೆಂದೂ ಕಾಯಕಷ್ಟದಿಂದಲೇ ಜೀವಿಸುವವರನ್ನು ಶೂದ್ರರೆಂದೂ ಕರೆಯುತ್ತಿದ್ದರು; ಆದರೆ ಕ್ಷತ್ರಿಯನು ವೇದಾದಿಗಳನ್ನು ಕಲಿಯಲಿಕ್ಕೂ ಬ್ರಾಹ್ಮಣನು ಧನುರ್ಧಾರಿಯಾಗಿ ಯುದ್ಧ ಮಾಡಲಿಕ್ಕೂ ಆತಂಕವಿರಲಿಲ್ಲ. ವರ್ಣವರ್ಣಗಳೊಳಗೆ ವಿವಾಹಗಳೂ ನಡೆಯುತ್ತಿದ್ದುವು, ಆರ್ಯ ಅನಾರ್ಯರೊಳಗೂ ವಿವಾಹ

ಸಂಬಂಧಗಳು ನಡೆಯದಿರುತ್ತಿದ್ದರೆ ಮಿಶ್ರಜನಾಂಗವಾದ ಭಾರತೀಯ ಜನಾಂಗ ಹುಟ್ಟುತ್ತಿರಲಿಲ್ಲ.

ಆದರೆ ಕಾಲಕ್ರಮೇಣ ವರ್ಣಭೇದ, ವೃತ್ತಿ ಭೇದಗಳಿದ್ದುದೇ ಜಾತಿ ಭೇದವಾಗಿ ಪರಿಣಮಿಸಿತು. ಬ್ರಾಹ್ಮಣರೆಂಬ ವರ್ಗದಲ್ಲಿ ಪ್ರದೇಶಭೇದ, ಭಾಷಾಭೇದ, ಆಚಾರಭೇದಗಳಿಂದ ನೂರಾರು ಒಳ ಪಂಗಡಗಳಾಗಿವೆ. ಹಾಗೆಯೇ ಕ್ಷತ್ರಿಯರೆಂದೆನಿಸಿಕೊಳ್ಳುವವರಲ್ಲಿಯೂ ಇತರರಲ್ಲಿಯೂ ಸಾವಿರಾರು ಚಿಕ್ಕಪುಟ್ಟ ಒಳಪಂಗಡಗಳಿವೆ. ಇವುಗಳಲ್ಲಿ ಕೆಲವು ಮೇಲೆಂದೂ ಕೆಲವು ಕೀಳೆಂದೂ ಗಣಿಸಲ್ಪಟ್ಟು ಜನಾಂಗದ ದೃಢವಾದ ಐಕ್ಯಕ್ಕೆ ಘಾತಕಕಾರಿಯಾಯಿತು. ಮಾತ್ರವಲ್ಲ, ಕೆಲವು ಜಾತಿಯವರು ಒಂದು ವೃತ್ತಿಯನ್ನೂ ಇನ್ನು ಕೆಲವರು ಇನ್ನೊಂದು ವೃತ್ತಿಯನ್ನೂ ಅನುಸರಿಸಬೇಕೆಂಬ ಕ್ರಮವಿಟ್ಟುಕೊಂಡುದರಿಂದ ಒಂದು ರೀತಿಯಲ್ಲಿ ಸಮಾಜದಲ್ಲಿ ನೆಮ್ಮದಿಗೆ ಕಾರಣವಾಗಿದ್ದರೂ ತಂದೆಯ ಗುಣವಿಶೇಷಗಳು ಮಗನಿಗೆ ಬರಲೇಬೇಕೆಂದಿಲ್ಲವಾದ ಕಾರಣ ಆಯಾ ವಿದ್ಯೆ ಕಲಿಯುವ ಯೋಗ್ಯತೆಯಿದ್ದವನ್ನು ಯಾವ ಕುಟುಂಬದಲ್ಲಿ ಹುಟ್ಟಿದ್ದರೂ ಅವನಿಗೆ ಅವಕಾಶ ಕಲ್ಪಿಸಿಕೊಡ್ಡುವುದೇ ಹಿತಕರವಾದುದರಿಂದ ಜಾತಿ ಭೇಧದಿಂದ ವೃತ್ತಿ ನಿರ್ಣಯವಾಗುವುದು ಹಾನಿಕರವೇ ಸರಿ.

ಹನ್ನೊಂದನೇ ಶತಮಾನದಲ್ಲಿ ಇಸ್ಲಾಂ ಧರ್ಮವು ಭಾರತದಲ್ಲಿ ಪ್ರವೇಶ ಮಾಡಿದಾಗ ಘರ್ಷಣೆಯು ಸಹಜವಾಗಿ ಉದ್ಭೂತವಾಯಿತು. ಶಕರು, ಹೂಣರೇ ಮೊದಲಾದವರು ಬಂದಾಗ ತಮ್ಮದೇ ಧರ್ಮಾಭಿಮಾನ ಅವರಲ್ಲಿ ವಿಶೇಷವಿಲ್ಲದುದರಿಂದ ಅವರೆಲ್ಲ ಹಿಂದೂ ಧರ್ಮದಲ್ಲೋ ಬೌದ್ಧ ಧರ್ಮದಲ್ಲೋ ಬೆರೆತುಹೋಗಿದ್ದರು. ಆದರೆ ಮುಸ್ಲಿಮರ ನಾಯಕರಾಗಿ ಬಂದವರಲ್ಲಿ ತಮ್ಮ ಮತದ ಕುರಿತು ಬಲವಾದ ಶ್ರದ್ಧೆಯಿದ್ದುದರಿಂದಲೂ ಮುಕ್ಕಾ ಪಟ್ಟಣದಲ್ಲಿದ್ದ ಮೂರ್ತಿಗಳನ್ನು ಭಗ್ನಮಾಡಿದುದನ್ನೇ ಆದರ್ಶವಾಗಿಟ್ಟುಕೊಂಡು ಮೂರ್ತಿಭಂಗವು ಪುಣ್ಯಪ್ರದವೆಂದು ನಂಬಿದುದರಿಂದಲೂ ಘರ್ಷಣೆಯು ಇನ್ನಷ್ಟು ಘೋರವಾಯಿತು. ಆದರೆ ಕಬೀರನಂಥ ಭಕ್ತರೂ ಅಕ್ಬರನಂಥ ಅರಸರೂ ಹಿಂದೂ ಮುಸ್ಲಿಮರೊಳಗೆ ಐಕ್ಯವನ್ನು ಸ್ಥಾಪಿಸುವ ಯತ್ನಮಾಡಿದರು. ಇಂಥ ಪ್ರಯತ್ನಗಳಿಂದಾಗಿ

ಹಿಂದೂ ಹಬ್ಬಗಳಲ್ಲಿ ಮುಸ್ಲಿಮರೂ ಮುಸ್ಲಿಮರ ಹಬ್ಬಗಳಲ್ಲಿ ಹಿಂದೂಗಳೂ ಭಾಗವಹಿಸುವ ರೂಢಿ ಹಳ್ಳಿಹಳ್ಳಿಗಳಲ್ಲೂ ಹಬ್ಬಿತು. ಆದರೂ ಹಿಂದುಗಳಲ್ಲಿ ಜಾತಿಭೇದ, ಮೇಲು ಕೀಳೆಂಬ ಭಾವನೆ ವಿಶೇಷವಾಗಿ ಬೆಳೆದಿದ್ದುದರಿಂದ ಹಿಂದುಗಳಾಗಿದ್ದವರು ಸ್ವಬುದ್ಧಿಯಿಂದಲೋ ಸಂದರ್ಭಾನುಸಾರವಾಗಿಯೋ ಅನ್ಯಮತವನ್ನು ಅಂಗೀಕರಿಸಿದರೆ ಅವರಿಗೆ ತಿರುಗಿ ಹಿಂದೆ ಬರಲಾಗಲಿಲ್ಲ. ಹಿಂದೆ ಕುಶಾನರನ್ನೂ ಹೂಣರನ್ನೂ ಹಿಂದುಗಳನ್ನಾಗಿ ಮಾಡಿದಂತೆ ಮುಸ್ಲಿಮರನ್ನು ಹಿಂದುಗಳನ್ನಾಗಿ ಮಾಡುವ ಯತ್ನಗಳಾಗಲಿಲ್ಲ. ಈ ಎರಡು ಬಲವಾದ ಕಾರಣಗಳಿಂದಾಗಿ ಈ ಮತಗಳೊಳಗೆ ಸಮನ್ವಯವಾಗಲಿಲ್ಲವೆಂದೇ ಹೇಳಬಹುದು.

ಹಿಂದೂ ಧರ್ಮವು ಪ್ರಬಲವಾಗಿ ಬೌದ್ಧ ಧರ್ಮವು ಖಿಲವಾಗುವಂತೆ ಯತ್ನಿಸಿದವರು ವೇದಾಂಗಗಳಾದ ಉಪನಿಷತ್ತುಗಳಿಗೂ ಮಹಾಭಾರತದಲ್ಲಿರುವ ಭಗವದ್ಗೀತೆಗೂ ಟೀಕೆ ಬರೆದು ಬೌದ್ಧ ತಾರ್ಕಿಕರೊಡನೆ ವಾದ ಮಾಡಿ ಅವರನ್ನು ಸೋಲಿಸಿದರು. ಮಾತ್ರವಲ್ಲ ಜನಪ್ರಿಯವಾದ ರಾಮಾಯಣಾದಿಗಳನ್ನು ಉಪಯೋಗಿಸಿ ಭಕ್ತಿಮಾರ್ಗವನ್ನು ಬೋಧಿಸಿ "ಎಷ್ಟೇ ಪಾಪಿಯಿರಲಿ, ಎಷ್ಟೇ ಮೂಢನಿರಲಿ, ದೇವರನ್ನು ಶರಣು ಹೋಗಿ ಭಕ್ತಿಯಿಂದ ಬೇಡಿದರೆ ಪರಮಾತ್ಮನು ಕರುಣೆಯಿಂದ ಅವನ ಪಾಪವಿಮೋಚನೆ ಮಾಡಿ ಮುಕ್ತಿ ನೀಡುವನು" ಎಂದು ಬೋಧಿಸಿದ ಅವರ ನೂತನ ರೀತಿ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಹೀಗೆ ಜ್ಞಾನವಂತರಿಗೆ ಜ್ಞಾನಮಾರ್ಗ, ಆಡಳಿತೆ ವ್ಯಾಪಾರ ಉದ್ಯೋಗಗಳಲ್ಲಿ ತೊಡಗಿರುವ ಗೃಹಸ್ಥರಿಗೆ ಕರ್ಮಮಾರ್ಗ, ಎಲ್ಲರಿಗೂ ಭಕ್ತಿಮಾರ್ಗವೆಂದು ಮುಕ್ತಿಸಾಧನೆಗೆ ಅವರವರ ಅನುಕೂಲತೆಗಳಿಗೆ ತಕ್ಕುವಾದ ಮಾರ್ಗಗಳಿವೆಯೆಂದು ಸಾರಿದುದರಿಂದ ಹಿಂದೂ ಧರ್ಮವು ಸರ್ವಮಾನ್ಯವಾಯಿತು.

ಹಿಂದೂ ಧರ್ಮದ ಉತ್ಥಾನಕ್ಕೆ ಕಾರಣರಾದ ಮಹಾವ್ಯಕ್ತಿಗಳನೇಕರಲ್ಲಿ ಶಂಕರ, ರಾಮಾನುಜ, ಮಧ್ವರೆಂಬ ಆಚಾರ್ಯತ್ರಯರನ್ನೂ ಚೈತನ್ಯಾದಿ ಸಾಧುಸಂತರನ್ನೂ ನೆನೆಯಲೇ ಬೇಕು. ತಿರುವಾಂಕೂರು ಸಂಸ್ಥಾನದಲ್ಲಿ ಹುಟ್ಟಿದ ಶಂಕರಾಚಾರ್ಯರು ಬಾಲಸನ್ಯಾಸಿಯಾಗಿ ಭಾರತ

ದಲ್ಲೆಲ್ಲ ತಿರುಗಿ ಅನೇಕ ಬೌದ್ಧರನ್ನು ತರ್ಕದಲ್ಲಿ ಸೋಲಿಸಿ ಅದ್ವೈತ ತತ್ವವನ್ನು ಸಾರಿದರು. ತಮಿಳುನಾಡಿನಲ್ಲಿ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವನ್ನೂ ದಕ್ಷಿಣ ಕನ್ನಡ ಜಿಲ್ಲೆಯವರಾದ ಮಧ್ವಾಚಾರ್ಯರು ದ್ವೈತ ತತ್ವವನ್ನೂ ಪ್ರತಿಪಾದಿಸಿದರು. ಈ ಆಚಾರ್ಯರು ತಂತಮ್ಮ ತತ್ವಪ್ರಚಾರಕ್ಕೆಂದು ಅಲ್ಲಲ್ಲಿ ಸ್ಥಾಪಿಸಿದ ಮಠಗಳು ಅನೇಕ ಕಡೆಗಳಲ್ಲಿ ಈಗಲೂ ಇವೆ. ಅವುಗಳಲ್ಲಿ ಶಂಕರಾಚಾರ್ಯರಿಂದ ಸ್ಥಾಪನೆಯಾದುವೆಂದು ಹೇಳಲ್ಪಡುವ ಮಠಗಳನ್ನೂ ದೇವಸ್ಥಾನಗಳನ್ನೂ ಹಿಮಾಚಲದಿಂದ ಕನ್ಯಾಕುಮಾರಿಯವರೆಗೆ ಎಲ್ಲೆಲ್ಲೂ ಕಾಣಬಹುದು.

ಹಿಂದೂಧರ್ಮದ ಪ್ರಭಾವದಿಂದ ಬೌದ್ಧ ಧರ್ಮವು ಶಿಥಿಲವಾದರೂ ಮುಸ್ಲಿಮರ ದಾಳಿಯಿಂದ ಬಿಹಾರದಲ್ಲಿನ ಅನೇಕ ವಿಹಾರಗಳೂ ಚೈತ್ಯಾಲಯಗಳೂ ನಾಶವಾಗುವವರೆಗೆ ಅದು ಭಾರತದಲ್ಲಿ ಪ್ರಚಾರದಲ್ಲಿತ್ತು ಎನ್ನಬಹುದು. ಅನಂತರ ಅಲ್ಲಲ್ಲಿ ಉಳಿದ ಬೌದ್ಧರು ಹಿಂದುಗಳೊಡನೆ ಕಲೆತು ಹೋದರು; ಬೌದ್ಧ ಮಂದಿರಗಳು ಹಿಂದೂ ದೇವಸ್ಥಾನಗಳಾಗಿ ಮಾರ್ಪಟ್ಟುವು. ಬುದ್ಧ ಗಯೆ, ಸಾರನಾಥ ಮೊದಲಾದ ಬೌದ್ಧರ ಪವಿತ್ರಸ್ಥಳಗಳಲ್ಲಿ ಪೂಜೆಯನ್ನು ಬ್ರಾಹ್ಮಣರೇ ಮಾಡಬೇಕಾಯಿತು. ಬುದ್ಧನ ಮೂರ್ತಿಯನ್ನೇ ಶಿವನೆಂದು ಕೆಲವೆಡೆಗಳಲ್ಲಿ ಪೂಜಿಸಿದ್ದೂ ಇದೆ.

ಕಬೀರನು ಜೇಡರ ವೃತ್ತಿಯ ಬಡವನೊಬ್ಬನು. ರಾಮ, ರಹೀಮರೆಂಬ ಭೇದಮಾಡದೆ ಮಂದಿರ ಮಸೀದಿಯೆಂಬ ವ್ಯತ್ಯಾಸಮಾಡದೆ ಶುದ್ಧ ಹೃದಯ, ಪಾಪರಹಿತ ಜೀವನ, ದೇವರಲ್ಲಿ ಅನನ್ಯ ಭಕ್ತಿ—ಇರಬೇಕೆಂದು ಬೋಧಿಸಿದನು. ಅವನ ಕೀರ್ತನೆಗಳಿಂದಾಗಿ ಅವನ ಬೋಧನೆಗಳು ಎಲ್ಲೆಲ್ಲಿಯೂ ಕೇಳಬಂದುವು. ಕಬೀರ ಪಂಥಿಗಳೆಂಬ ಅವನ ಅನುಯಾಯಿಗಳ ಸಂಖ್ಯೆ ಬಹಳ ಅಲ್ಪವಿದ್ದರೂ 'ಕಹತಕಬೀರ' ಎಂಬ ಮುದ್ರಿಕೆಯಿರುವ ಪದ್ಯಗಳನ್ನು ಕೇಳದವರಿಲ್ಲ.

1469ರಲ್ಲಿ ಪಂಜಾಬಿನಲ್ಲಿ ಹುಟ್ಟಿ ಬೆಳೆದ ನಾನಕನು ಹಿಂದೂ ಧರ್ಮವನ್ನೂ ಖುರಾನನ್ನೂ ಅಭ್ಯಾಸಮಾಡಿ ಎರಡೂ ಮತದವರ ಪವಿತ್ರ ಸ್ಥಳಗಳಿಗೆ ಯಾತ್ರೆ ಮಾಡಿ, ತನ್ನಲ್ಲಿ ತಾನೇ ಧ್ಯಾನಿಸಿ ಹಿಂದುಗಳ ಆಚಾರ ವಿಚಾರಗಳೊಂದಿಗೆ ಇಸ್ಲಾಂ ಧರ್ಮದ ಏಕದೇವನ ಭಕ್ತಿಯನ್ನೂ ಸೇರಿಸಿ

ಬೋಧಿಸಿದ ತತ್ವಗಳೇ ಅವನ ಅನಂತರ ಬಂದ ಗುರುಗಳ ಕೈಯಲ್ಲಿ ರೂಪುಗೊಂಡು ಸಿಕ್ಖಪಂಥದ ಸ್ಥಾಪನೆಯಾಯಿತು. ಈಗ ಇದೂ ಒಂದು ಬೇರೆಯೇ ಪಂಥವಾಗಿ ಉಳಿದಿದೆ ಹೊರತು ಹಿಂದೂ ಮುಸ್ಲಿಮರ ಐಕ್ಯಕ್ಕೆ ಕಾರಣವಾಗಲಿಲ್ಲ.

ಕ್ರೈಸ್ತಧರ್ಮವು ಭಾರತಕ್ಕೆ ಪಾಶ್ಚಾತ್ಯರಿಗಿಂತ ಮೊದಲೇ ಬಂದಿತ್ತು. ಯೇಸುವಿನ ಶಿಷ್ಯರಲ್ಲೊಬ್ಬನಾದ ಸೈಂಟ್ ಥೋಮಸನೇ ಮದ್ರಾಸಿಗೆ ಬಂದಿದ್ದನೆಂದೂ ಅಲ್ಲಿನ ಇಗರ್ಜಿಯ ಇತಿಹಾಸದಲ್ಲಿ ಉಲ್ಲೇಖವಿದೆ. ಮಲಬಾರಿನಲ್ಲಿರುವ ಸಿರಿಯನ್ ಕ್ರೈಸ್ತರು ಪಾಶ್ಚಾತ್ಯರು ಬರುವ ಮೊದಲೇ ಇದ್ದವರು. ಪೊರ್ತುಗೀಸರು ಬಂದ ಅನಂತರ ಕ್ರಿಸ್ತಧರ್ಮ ಪ್ರಚಾರವು ಹೆಚ್ಚು ಹೆಚ್ಚಾಗಿ ಬೆಳೆಯಿತು. ಗೋವೆಯಲ್ಲಿ ಕ್ರೈಸ್ತೇತರರನ್ನು ಅವರು ಪೀಡಿಸುತ್ತಾರೆಂದು ಹೆದರಿ ಹಿಂದುಗಳಲ್ಲಿ ಕೆಲವರು ಅಲ್ಲಿಂದ ಓಡಿಹೋದ ರಾದರೂ ಅಂಥ ಪೀಡೆ ಬಹುಕಾಲವಿದ್ದಿರಲಿಲ್ಲ.

ಕ್ರೈಸ್ತಧರ್ಮದ ಪ್ರಚಾರವಾಗಲು ಮುಖ್ಯ ಕಾರಣರು ಪಾದ್ರಿಗಳು. ಆರಂಭದಲ್ಲಿ ಕೆಥೋಲಿಕ ಪಾದ್ರಿಗಳೂ ಅನಂತರ ಪ್ರೊಟೆಸ್ಟಾಂಟ ಪಾದ್ರಿಗಳೂ ಅಲ್ಲಲ್ಲಿ ನೆಲೆನಿಂತು ಜನರೊಡನೆ ಹೊಕ್ಕುಬಳಸಿ ದೀನದಲಿತರ ಸೇವೆಯನ್ನು ಕೈಗೊಂಡು, ಜಾತಿಭೇಧಗಳ ಅಂತಸ್ತಿನಲ್ಲಿ ಕೆಳಗಿರುವವರ ಉದ್ಧಾರಕ್ಕೆ ದುಡಿದು, ವಿದ್ಯಾಪ್ರಸಾರಮಾಡಿ, ವೈದ್ಯಸಹಾಯ ಕೊಟ್ಟು ಆದರ್ಶ ಜೀವನವನ್ನು ನಡೆಸಿದುದರ ಪರಿಣಾಮವಾಗಿ ಕ್ರೈಸ್ತಧರ್ಮವು ಬಲವಾಗಿ ಬೇರೂರಿತು.

ಕ್ರೈಸ್ತಧರ್ಮವನ್ನು ಅಂಗೀಕರಿಸದವರಲ್ಲಿ ಸಹ ಕ್ರೈಸ್ತಧರ್ಮದವರಿಂದ ಬಹು ವಿಧದ ಮಾರ್ಪಾಟುಗಳಾದುವು. ಕ್ರೈಸ್ತಧರ್ಮವನ್ನೂ ಹಿಂದೂಧರ್ಮದ ಮೂಲ ತತ್ವಗಳನ್ನೂ ಸಮನ್ವಯಿಸುವ ಪ್ರಯತ್ನವೆಂಬಂತೆ ಬಂಗಾಳದ ರಾಜಾರಾಮಮೋಹನ ರಾಯಿಯವರು ಸ್ಥಾಪಿಸಿದ ಬ್ರಾಹ್ಮಸಮಾಜವು ಅಲ್ಲಲ್ಲಿ ಕೆಲವೇ ಮನೆತನದವರನ್ನು ಆಕರ್ಷಿಸಿತಾದರೂ ಇತರರ ದೃಷ್ಟಿಕೋನವನ್ನು ಸುಧಾರಣೆಯ ಕಡೆಗೆ ತಿರುಗಿಸಿತು. ಸೌರಾಷ್ಟ್ರದ ಸ್ವಾಮಿ ದಯಾನಂದ ಸರಸ್ವತಿಯವರು ಮೂರ್ತಿಪೂಜೆಯನ್ನೂ ಜಾತಿಭೇದವನ್ನೂ ಖಂಡಿಸಿ ವೇದಕಾಲದ ಆರ್ಯರಂತಿರಬೇಕೆಂದು ಆರ್ಯ

ಸಮಾಜವನ್ನು ಸ್ಥಾಪಿಸಿದರು. ಗೋಪಾಲಕೃಷ್ಣಗೋಖಲೆ, ಮಹಾತ್ಮಾ ಗಾಂಧಿಯಂಥವರು ಹಿಂದೂಧರ್ಮದಲ್ಲೇ ಉಳಿದು ಅಸ್ಪೃಶ್ಯತೆಯನ್ನು ನಿವಾರಿಸಿ, ಜಾತಿಭೇದದ ದುಷ್ಪರಿಣಾಮಗಳನ್ನು ಅಳಿಸಿ, ಸ್ತ್ರೀಯರ ಸ್ಥಾನ ಮಾನಗಳನ್ನು ಹೆಚ್ಚಿಸಿ ಜನರು ಸುಧಾರಿಸುವಂತೆ ಯತ್ನಿಸಿದರು.

ಹೀಗೆ ಜಗತ್ತಿನ ಮುಖ್ಯ ಮತಗಳಲ್ಲಿ ಮೂರು ಇಲ್ಲಿಯೇ ಹುಟ್ಟಿದುವು, ಎರಡು ಇಲ್ಲಿಗೆ ಹೊರಗಿನಿಂದ ಬಂದುವು. ಮಾತ್ರವಲ್ಲ ಪರ್ಶಿಯಾ ದೇಶದಲ್ಲಿ ಇಸ್ಲಾಂ ಧರ್ಮವು ಹಬ್ಬುತ್ತಿದ್ದಾಗ ಪ್ರಾಚೀನ ಜೊರೊವಾಸ್ತ್ರನ ಮತವನ್ನನುಸರಿಸಿದ್ದವರಲ್ಲಿ ಕೆಲವರು ತಲೆತಪ್ಪಿಸಿಕೊಂಡು ಗುಜರಾತಿನಲ್ಲಿ ಆಶ್ರಯಪಡೆದರು. ಈಗಲೂ ಈ ಫಾರ್ಸಿಗಳು ತಮ್ಮ ಪ್ರಾಚೀನ ಮತವನ್ನನುಸರಿಸುತ್ತಿರುವರಾದರೂ ಗುಜರಾತಿ ಭಾಷೆಯನ್ನಾಡುತ್ತಾರೆ, ಇಲ್ಲಿನ ಜನರೊಳಗೆ ಕಲೆತುಹೋಗಿದ್ದಾರೆ. ಹಾಗೆಯೇ ಎಷ್ಟೋ ಕಾಲದ ಹಿಂದೆಯೇ ಪೆಲಸ್ತೀನಿನಿಂದ ಓಡಿಬಂದ ಯೆಹೂದ್ಯರು ಕೆಲವರು ತಿರುವಾಂಕೂರು—ಕೊಚ್ಚಿಗಳಲ್ಲಿ ಆಶ್ರಯಪಡೆದಿದ್ದಾರೆ. ಮೊನ್ನೆ ಮೊನ್ನೆ ಸ್ವತಂತ್ರ ಇಸ್ರಯೇಲ್ ರಾಷ್ಟ್ರವಾಯಿತೆಂದು ತಿರುಗಿ ತಮ್ಮ ಮಾತೃಭೂಮಿಗೆ ಹೋದ ಕೆಲವರು ಅಲ್ಲಿನ ಸ್ಥಿತಿಗತಿಗಳೊಡನೆ ಸೇರಿಕೊಳ್ಳಲು ಸಾಧ್ಯವಾಗದೆ ಭಾರತಕ್ಕೇ ಹಿಂದಿರುಗುವೆವೆಂದು ಹಟಹಿಡಿದರಂತೆ; ಅವರಲ್ಲಿ ಭಾರತವಾಸ ಅಷ್ಟು ಪರಿಣಾಮ ಮಾಡಿದೆ.

ಹಿಂದೂಮತದ ಮೇಲೆ ಇಸ್ಲಾಂಧರ್ಮವು ಬೀರಿದ ಪ್ರಭಾವಕ್ಕಿಂತ ಕ್ರೈಸ್ತಧರ್ಮವು ಹೆಚ್ಚಿನ ಪರಿಣಾಮ ಮಾಡಿದೆ ಎಂದು ಹೇಳಬಹುದು. ಇತರ ಧರ್ಮಗಳೂ ಹಿಂದೂಧರ್ಮದಿಂದ ಸರ್ವಧರ್ಮ ಸಹಿಷ್ಣುತೆಯನ್ನು ಕಲಿಯುವಂತಾಗಿದೆ. ಮಾತ್ರವಲ್ಲ ಕ್ರೈಸ್ತರಲ್ಲಿ ಕೆಲವರು ತಾವು ಧರ್ಮ ತತ್ವಗಳನ್ನು ಬದಲಾಯಿಸಿದರೂ ಭಾರತದ ಪ್ರಾಚೀನ ಸಂಸ್ಕೃತಿಯನ್ನು ಮರೆಯಬಾರದೆಂದು, ಕ್ರೈಸ್ತ ದೇವಾಲಯಗಳಲ್ಲಿ ಹಿಂದಿನ ದೇವಸ್ಥಾನಗಳ ಗೋಪುರ, ಮಂಟಪಗಳ ಶೈಲಿಯನ್ನು ಅಳವಡಿಸಿಕೊಳ್ಳಬೇಕೆಂದೂ ದೇವಾಲಯಗಳ ಭಜನೆಗಳಲ್ಲಿ ಭಾರತೀಯ ಸಂಗೀತವನ್ನು ಉಪಯೋಗಿಸಬೇಕೆಂದೂ ಯತ್ನಿಸುತ್ತಿದ್ದಾರೆ. ಕ್ರಿಸ್ತನ ಬೋಧನೆಯಂತೆ ನಡೆದು ದೀನದಲಿತರ ಸೇವೆಮಾಡುವವರ ನೆಲೆಗಳನ್ನು ಆಶ್ರಮಗಳೆಂದು ಕರೆಯು

ತ್ತಿದ್ದಾರೆ. ಇದರೊಂದಿಗೆ ಹಿಂದೂ ಸಮಾಜದ ಜಾತೀಯತೆಯ ಕುರುಹುಗಳು ಸಹ ಕ್ರೈಸ್ತ ಸಮಾಜದಲ್ಲಿ ಉಳಿದುಬಂದುದು ವಿಷಾದಕರ; ಈಗಲೂ ಕೆಲವೆಡೆಗಳಲ್ಲಿ ಬ್ರಾಹ್ಮಣ–ಕ್ರೈಸ್ತರು, ಮೇಲ್ಜಾತಿಯ ಕ್ರೈಸ್ತರು ಎಂಬ ಭೇದಗಳನ್ನಿಟ್ಟುಕೊಂಡು ತಮ್ಮವೇ ಇಗರ್ಜಿಗಳನ್ನು ಕಟ್ಟಿಸುವುದಕ್ಕೂ ತಾವು ಬೇರೆಯೇ ಉಳಿಯುವಂತೆಯೂ ಯತ್ನಿಸುವುದು ಸಮಂಜಸವಲ್ಲ.

ರವೀಂದ್ರರು ಹಾಡಿದಂತೆ ಅನೇಕ ಜನಾಂಗಗಳು ಒಂದೆಡೆ ಸೇರಿವೆ, ಅನೇಕ ಮತಗಳೂ ಒಂದೇ ಸಿಂಹಾಸನದ ಸುತ್ತಲೂ ನಿಂತಿವೆ. ಇವುಗಳೊಳಗೆ ಘರ್ಷಣೆಯಾಗದೆ ಶಾಂತರೀತಿಯಲ್ಲಿ ಒಬ್ಬರು ಇನ್ನೊಬ್ಬರನ್ನು ಮೆಲ್ಮಟ್ಟಕ್ಕೆ ತಂದು ಪ್ರೇಮಹಾರವನ್ನು ಹೆಣೆಯುವ ಆದರ್ಶವನ್ನು—ಭಾರತದ ಸಾವಿರಾರು ವರ್ಷಗಳ ಇತಿಹಾಸ ಕಲಿಸಿದ್ದನ್ನು—ಮರೆಯದಿದ್ದರಾಯಿತು.



# ೭. ಜ್ಞಾನದರ್ಶನ

| | | | | |
|---|---|---|---|---|
| 1 | 2 | 3 | 4 | 5 |
| 6 | 7 | 8 | 9 | 0 |
| ೧ | ೨ | ೩ | ೪ | ೫ |
| ೬ | ೭ | ೮ | ೯ | ೦ |

ಪೌರಸ್ತ್ಯರ ಕುರಿತು—ಮುಖ್ಯವಾಗಿ ಭಾರತೀಯರ ವಿಷಯದಲ್ಲಿ—ಇನ್ನೊಂದು ತಪ್ಪಾದ ಅಭಿಪ್ರಾಯವು ಪಾಶ್ಚಾತ್ಯರಲ್ಲಿ ಬೇರೂರಿದೆ. ಭಾರತೀಯರು ಪಾರಮಾರ್ಥಿಕ ವಿಚಾರಗಳಲ್ಲೇ ಮಗ್ನರಾಗಿರುವವರಲ್ಲದೆ ಪ್ರಾಪಂಚಿಕಜ್ಞಾನ, ಕಾರ್ಯಕ್ಷೇತ್ರಗಳಲ್ಲಿ ಅವರು ಅಷ್ಟೊಂದು ಉತ್ಸಾಹದಿಂದ ಮುಂದುವರಿದವರಲ್ಲವೆಂದು ಅವರ ಭಾವನೆ.

ನಮ್ಮ ಪೂರ್ವಜರು ನಮ್ಮೆದುರು — ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಆದರ್ಶವನ್ನು ಶತಮಾನಗಳ ಹಿಂದೆಯೇ ನಿಲ್ಲಿಸಿದ್ದ ಸಂಗತಿ ಬಹುಶಃ ಪಾಶ್ಚಾತ್ಯರಿಗೆ ತಿಳಿದಿರಲಾರದು. ರಘುಕುಲದ ರಾಜರ ಗುಣಗಾನವನ್ನು ಮಾಡುವಾಗ, ಬಾಲ್ಯದಲ್ಲಿ ವಿದ್ಯೆಯನ್ನು ಅಭ್ಯಸಿಸಿ ಯೌವನದಲ್ಲಿ ಇಹಸುಖವನ್ನು ಅನುಭವಿಸಿ ವಾರ್ಧಕ್ಯದಲ್ಲಿ ಮುನಿಗಳಾದ ರಾಜಶ್ರೇಷ್ಠರೆಂದು ಅವರನ್ನು ಕಾಳಿದಾಸನು ವರ್ಣಿಸಿದ್ದಾನೆ. ಪಾರಮಾರ್ಥಿಕ ಪ್ರಗತಿಯಿಂದ ಇಹಲೋಕದ ಸುಖಾನು

ಭವಗಳನ್ನೂ ಹೊಂದಬಹುದು, ಪರಮಾರ್ಥವನ್ನು ಸಾಧಿಸಲಿಕ್ಕೂ ವಿದ್ಯೆಯು ಅತ್ಯಗತ್ಯ, ಎಂಬುದನ್ನು ಭಾರತೀಯರು ಸರಿಯಾಗಿಯೇ ತಿಳಿದಿದ್ದರು.

ಪ್ರಾಚೀನ ಕಾಲದಲ್ಲಿ ಜ್ಞಾನಿಗಳನ್ನು ಋಷಿಗಳೆಂದು ಸಂಬೋಧಿಸುತ್ತಿದ್ದರು. ತಾವು ಪಡೆದ ವಿದ್ಯೆ, ತಾವು ಸಂಪಾದಿಸಿದ ಜ್ಞಾನಗಳನ್ನು ಇತರರಿಗೆ, ಸತ್ಪಾತ್ರರಿಗೆ ದಾನಮಾಡುವುದು ತಮ್ಮ ಧರ್ಮವೆಂದು ತಿಳಿದಿದ್ದ ಆ ಋಷಿಗಳು ಸತ್ಯಾನ್ವೇಷಣದೊಂದಿಗೆ ವಿದ್ಯಾದಾನವನ್ನೂ ಮಾಡುತ್ತಿದ್ದರು. ನಗರಾದಿಗಳಲ್ಲಿ ವಾಸಿಸದೆ ಅರಣ್ಯಗಳ ಶಾಂತವಾತಾವರಣದಲ್ಲಿದ್ದ ಅವರ ನೆಲೆಗಳನ್ನು ಆಶ್ರಮಗಳೆನ್ನುತ್ತಿದ್ದರು. ಆರ್ಯ ಬಾಲಕರು ಎಂಟು ವರ್ಷ ಪ್ರಾಯದವರಾದಾಗ ಋಷಿಗಳಿದ್ದಲ್ಲಿಗೆ ಹೋಗಿ ವಿದ್ಯಾದಾನವನ್ನು ಬೇಡಿದರೆ ಅವರ ಗುಣನಡತೆಗಳನ್ನು ಪರಿಶೀಲಿಸಿ ಯೋಗ್ಯರಿದ್ದವರಿಗೆ ವಿದ್ಯೆ ಸಿಕ್ಕುತ್ತಿತ್ತು. ಗುರುಕುಲದಲ್ಲೇ ನಿಂತು ಶಿಷ್ಯರು ಗುರುವಿನ ಶುಶ್ರೂಷೆಯನ್ನು ಮಾಡಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ತಂದೆತಾಯಿಗಳಂತೆಯೇ ತಮ್ಮ ಸೇವೆ ಮಾಡುತ್ತಿದ್ದ ಶಿಷ್ಯರನ್ನು ಗುರುಗಳೂ ಗುರುಪತ್ನಿಯರೂ ಮಕ್ಕಳಂತೆ ಪ್ರೇಮದಿಂದ ಪೋಷಿಸುತ್ತಿದ್ದರು. ಈ ರೀತಿಯ ನಿಕಟ ಸಂಬಂಧ ಗುರು–ಶಿಷ್ಯರಲ್ಲಿರಬೇಕೆಂದು ಈಗಲೂ ವಿಚಾರಿಗಳು ಬೋಧಿಸುತ್ತಿದ್ದಾರೆ.

ಆ ಕಾಲದಲ್ಲಿ ಪುಸ್ತಕಗಳಿಲ್ಲದುದರಿಂದ ಗುರುಗಳು ಹೇಳಿದ ಮಂತ್ರಗಳನ್ನೂ ಸೂತ್ರಗಳನ್ನೂ ಶಿಷ್ಯರು ಮುಖೋದ್ಗತಮಾಡಬೇಕಿತ್ತು. ಅಲ್ಲದೆ ಆಗಾಗ ಮಂತ್ರಾರ್ಥಗಳ ಕುರಿತು ವ್ಯಾಖ್ಯಾನ, ಸಂಭಾಷಣೆ, ಪ್ರವಚನಗಳೂ ನಡೆಯುತ್ತಿದ್ದುವು. ಗುರುಕುಲಗಳಲ್ಲಿ ವೇದಗಳನ್ನೂ ಯಜ್ಞಕರ್ಮಾದಿಗಳನ್ನೂ ಕಲಿಸುವುದರೊಂದಿಗೆ ಪ್ರತಿಯೊಬ್ಬರಿಗೂ ಗೃಹಸ್ಥಧರ್ಮವನ್ನೂ ಕ್ಷತ್ರಿಯರಿಗೆ ಧನುರ್ವಿದ್ಯೆ, ರಾಜನೀತಿಗಳನ್ನೂ ಬೋಧಿಸುತ್ತಿದ್ದರು. ಬ್ರಾಹ್ಮಣರು ಹೆಚ್ಚಾಗಿ ತತ್ವಜ್ಞಾನ, ವ್ಯಾಕರಣ, ತರ್ಕಶಾಸ್ತ್ರ, ಆಯುರ್ವೇದಗಳನ್ನು ಅಭ್ಯಸಿಸುತ್ತಿದ್ದರು.

ಆ ಕಾಲದ ವಿದ್ಯಾರ್ಥಿ ಜೀವನವೆಂದರೆ ಸಂಯಮ, ವಿಧೇಯತೆಗಳ ಉದಾತ್ತ ಆದರ್ಶವಾಗಿತ್ತು. ಸೂರ್ಯೋದಯಕ್ಕಿಂತ ಮೊದಲೇ ಏಳ

ಬೇಕು, ನಿತ್ಯಕ್ರಿಯೆಗಳನ್ನೂ ಆಹ್ನಿಕಗಳನ್ನೂ ಕ್ರಮದಲ್ಲಿ ತೀರಿಸಬೇಕು, ಆಹಾರದಲ್ಲಿ ರುಚಿಗಿಂತ ಆರೋಗ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರಬೇಕು, ಹಗಲಲ್ಲಿ ನಿದ್ದೆಮಾಡದೆ ಪಾಠದಲ್ಲೂ ಕೆಲಸದಲ್ಲೂ ಮಗ್ನರಾಗಿರಬೇಕು, ಉಡುಗೆಯೂ ಅತ್ಯಂತ ಸರಳವಾಗಿರಬೇಕು, ಪ್ರತಿಯೊಂದು ನಿಮಿಷದಲ್ಲೂ ತಾನು ಬ್ರಹ್ಮಚಾರಿಯಾಗಿ ಪರಮಾತ್ಮನಿಗೊಪ್ಪಿಗೆಯಾಗಿರುವ ರೀತಿಯಲ್ಲಿ ಜೀವನ ನಡೆಸಬೇಕು. ಇಂದಿನ ವಿದ್ಯಾರ್ಥಿಗಳಲ್ಲಾಗಲೀ ಅಧ್ಯಾಪಕರಲ್ಲಾಗಲೀ ಅಂದಿನ ರೀತಿಯ ಜೀವನ ನಡೆಸಲಿಕ್ಕೆ ಎಷ್ಟು ಮಂದಿ ಮುಂದೆ ಬಂದಾರು! ಯುರೋಪಿನ ವಿಶ್ವವಿದ್ಯಾಲಯಗಳಲ್ಲಿ ಸಹ–ಪ್ರಾಚೀನ ಕಾಲದ ವಿದ್ಯಾರ್ಥಿ ಜೀವನಕ್ಕೂ ಇಂದಿನದಕ್ಕೂ ಹೋಲಿಕೆಯಿಲ್ಲದಿದ್ದರೂ–ಹಿಂದಿನ ನೆನಪಿಗಾಗಿ ಪಾಠಕ್ಕೆ ಹೋಗುವಾಗ ಹಿಂದಿನ ರೀತಿಯ ನಿಲುವಂಗಿಯನ್ನು ಧರಿಸುವ ಕ್ರಮ ಈಗಲೂ ಇದೆ. ನಮ್ಮಲ್ಲಿ ಪ್ರಾಚೀನತೆಯ ಕುರುಹು ಕೂಡ ಉಳಿದಿಲ್ಲ; ಯುರೋಪಿನ ನಿಲುವಂಗಿ ನಮಗೂ ಬೇಕಾಗಿದೆ, ಆಶ್ರಮವಾಸಿಗಳ ಉಪವೀತವಾಗಲೀ ಕಾಷಾಯ ವಸ್ತ್ರವಾಗಲೀ ಲಜ್ಜಾಸ್ಪದವಾಗಿದೆ!

ಶತಮಾನಗಳು ದಾಟಿದಾಗ ಚಿಕ್ಕಚಿಕ್ಕ ಆಶ್ರಮಗಳ ಸ್ಥಾನದಲ್ಲಿ ದೊಡ್ಡದೊಡ್ಡ ವಿಶ್ವವಿದ್ಯಾಲಯಗಳು ರಾಜರ ಮತ್ತು ಧನಿಕರ ಆಶ್ರಯದಲ್ಲಿ ಸ್ಥಾಪಿತವಾದುವು. ನಾಲಂದ, ತಕ್ಷಶಿಲೆ, ಉಜ್ಜಯಿನಿಯಂಥ ವಿಖ್ಯಾತ ವಿಶ್ವವಿದ್ಯಾಲಯಗಳಲ್ಲಿ ನೂರಾರು ಬೋಧಕರೂ ಸಾವಿರಾರು ವಿದ್ಯಾರ್ಥಿಗಳೂ ವಾಸಿಸುತ್ತಿದ್ದು ವಿದ್ಯಾಭ್ಯಾಸಪಡೆಯುತ್ತಿದ್ದರು. ನಮ್ಮ ವಿಶ್ವವಿದ್ಯಾಲಯಗಳ ಕೀರ್ತಿ ಭಾರತದ ಹೊರಗೆ ಸಹ ಪಸರಿಸಿ ಚೀನಾ, ಸಿಂಹಳ, ಮತ್ತಿತರ ದೇಶಗಳಿಂದ ವಿದ್ಯಾವಂತರು ತಮ್ಮ ವಿದ್ಯೆಯನ್ನು ಪೂರ್ಣಗೊಳಿಸಬೇಕೆಂದು ಭಾರತಕ್ಕೆ ಬರುತ್ತಿದ್ದರು. ನಮ್ಮಲ್ಲಿಂದ ವಿದ್ವಾಂಸರು ಇತರ ದೇಶಗಳಿಗೆ ಹೋಗಿ ಅಲ್ಲಿನ ವಿದ್ಯಾಲಯಗಳಲ್ಲಿ ಪ್ರವಚನಗಳನ್ನು ಕೊಡುತ್ತಿದ್ದರು.

ಅಫ್ಘಾನರ ಹಾವಳಿ ಹೆಚ್ಚಿದಾಗ ಈ ವಿಶ್ವವಿದ್ಯಾಲಯಗಳಿಗೆ ರಾಜಾಶ್ರಯ ತಪ್ಪಿತು. ಮಾತ್ರವಲ್ಲ, ಆಗಂತುಕರು ವಿಶ್ವವಿದ್ಯಾಲಯಗಳನ್ನು ಸಹ ಸೂರೆಗೊಂಡು ನಾಶಮಾಡಿದರು. ಹೀಗಾಗಿ ಉಚ್ಚ ಶಿಕ್ಷಣವು ಮೃತ

ಪ್ರಾಯವಾಯಿತು. ಅಲ್ಲಲ್ಲಿ ಹಳ್ಳಿಗಳಲ್ಲಿದ್ದ ಐಗಳ ಮಠಗಳೂ, ದೇವ ಸ್ಥಾನ ಮತ್ತು ಗುರುಮಠಗಳಲ್ಲಿದ್ದ ಸಂಸ್ಕೃತ ಶಾಲೆಗಳೂ ನಿರ್ನಾಮವಾ ಗಲಿಲ್ಲ. ಕಾಶಿಯಂಥ ಕ್ಷೇತ್ರದಿಂದ ವಿದ್ವಾಂಸರು ಕದಲಲಿಲ್ಲ, ಮಧುರೆ ಯಂಥ ಪಟ್ಟಣಗಳಲ್ಲಿ ವಿದ್ವಜ್ಜನರ ಸಭೆಗಳು ಮುಂದುವರಿದುವು. ಆದರೂ ತಕ್ಷಶಿಲಾ, ಉಜ್ಜಯಿನಿಗಳ ಖ್ಯಾತಿಯು ಕೊನೆಗೊಂಡಿತು.

ಮುಸ್ಲಿಮ್ ಅರಸರ ಆಶ್ರಯದಲ್ಲಿ ಅರಬೀ ಭಾಷೆ, ಪಾರಸೀ ಭಾಷೆಗಳಿಗೆ ಪ್ರೋತ್ಸಾಹ ದೊರೆಯಿತು. ಅವನ್ನು ಕಲಿಸುವ ಮದ್ರಸಾ (ಶಾಲೆ)ಗಳು ತಲೆಯೆತ್ತಿದುವು. ಸಂಸ್ಕೃತದ ಕೆಲವು ಗ್ರಂಥಗಳು ಫಾರಸೀ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟವು, ನವೀನ ಭಾಷೆಗಳಿಂದ ಅನೇಕ ಪದಗಳು ಇಲ್ಲಿನ ಭಾಷೆಗಳಲ್ಲಿ ಸೇರಿಹೋದುವು ಮಾತ್ರವಲ್ಲ, ಪಾರಸೀ–ಹಿಂದೀಗಳ ಮಿಶ್ರವಾದ ಉರ್ದು ಭಾಷೆಯೂ ಹುಟ್ಟಿತು.

ಹತ್ತೊಂಬತ್ತನೇ ಶತಮಾನದ ಪೂರ್ವಾರ್ಧದಲ್ಲಿ ಪಾಶ್ಚಾತ್ಯ ರೀತಿಯ ಶಾಲೆಗಳನ್ನು ಇಲ್ಲಿ ಸ್ಥಾಪಿಸುವ ಕೆಲಸ ಕಂಪೆನಿ ಸರಕಾರದಿಂದ ಆರಂಭಿ ಸಲ್ಪಟ್ಟು ಅನಂತರ ಕ್ರೈಸ್ತ ಪಾದ್ರಿಗಳಿಂದ ವರ್ಧಿಸಲ್ಪಟ್ಟಿತು. ಭಾರತೀ ಯರಿಗೆ ಇಂಗ್ಲಿಷು ವಿದ್ಯಾಭ್ಯಾಸ ಬೇಕೋ ಬೇಡವೋ ಎಂಬ ತರ್ಕವೆ ದ್ದಾಗ ರಾಜಾರಾಮಮೋಹನ ರಾಯಿಯಂಥವರು ಇಂಗ್ಲಿಷು ವಿದ್ಯೆ ಬೇಕೆಂದು ಒತ್ತಾಯಿಸಿದರಂತೆ. ಆದರಿಂದಾಗಿ ಇಂಗ್ಲಿಷು ಸಾಹಿತ್ಯ, ಇಂಗ್ಲಿಷರ ರಾಜಕೀಯ ಮತ್ತು ಪ್ರಜಾಪ್ರಭುತ್ವಗಳ ಜ್ಞಾನ ವಿದ್ಯಾವಂತ ರಿಗಾಗುವುದರೊಂದಿಗೆ ಪ್ರತಿಯೊಂದೂ ಪಾಶ್ಚಾತ್ಯಕ್ರಮವೆಂದರೆ ಉತ್ತಮ, ಪೌರಸ್ತ್ಯವೆಂದರೆ ಹೀನವೆಂದು ಹೇಳುವ ಅಂಧ ಭಕ್ತಿಯೂ ಬಹುಜನ ರಲ್ಲಿ ಮೂಡಿತು.

ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ನಮ್ಮ ಆತ್ಮವನ್ನೇ ಮಾರಿಕೊಂಡಂತಾ ಯಿತೆಂದು ತಿಳಿದು ಆರ್ಯ ಸಮಾಜದ ಮುಂದಾಳುಗಳು ವೇದಕಾಲದ ರೀತಿಯ ಗುರುಕುಲಗಳನ್ನು ಸ್ಥಾಪಿಸುವ ಯತ್ನ ಮಾಡಿದರು. ರವೀಂ ದ್ರರು ತಮ್ಮ ಶಾಂತಿನಿಕೇತನವು ವಿಶ್ವಸಂಸ್ಕೃತಿಪಕ್ಷಿಯ ಗೂಡಾಗಬೇಕೆಂಬ ಆದರ್ಶವಿಟ್ಟುಕೊಂಡು ವಿಶ್ವಭಾರತಿಯನ್ನು ಸ್ಥಾಪಿಸಿದರು. ಮಹಾತ್ಮಾ ಗಾಂಧಿಯವರು ಭಾರತದ ಪುನರ್ನಿರ್ಮಾಣವಾಗಬೇಕಾದರೆ ಇಲ್ಲಿ

ಸರ್ವೋದಯ ಸಮಾಜವು ಬೆಳೆಯಬೇಕಾದರೆ, ವಿದ್ಯೆಯ ರೀತಿಯಲ್ಲಿ ಆಮೂಲಾಗ್ರ ಸುಧಾರಣೆಯಾಗಬೇಕೆಂದು ಬಡವಬಲ್ಲಿದರೆನ್ನದೆ ಎಲ್ಲಾ ಮಕ್ಕಳು ಮಾನಸಿಕ ವಿದ್ಯೆಯನ್ನು ಕೈಕಸಬು, ದೇಹಶ್ರಮ ಇವುಗಳ ಮೂಲಕ ಕಲಿಯಬೇಕೆಂದು ಮೂಲ (ಬುನಾದಿ) ಶಿಕ್ಷಣವೆಂಬ ನೂತನ ಮಾರ್ಗವನ್ನು ತೋರಿಸಿದ್ದಾರೆ.

ವಿದ್ಯೆಯು ವೃದ್ಧಿಯಾಗಬೇಕಾದರೆ, ಜ್ಞಾನದ ಮೇರೆಗಳು ವಿಸ್ತರಿಸಲ್ಪಡಬೇಕಾದರೆ ಮನುಷ್ಯನ ವಿಚಾರಗಳಿಗೆ ಬಂಧನವಿರಬಾರದು. "ಚಿತ್ತ ಜೇಥಾ ಭಯವಿರಹಿತ" ಎಂದರೆ "ಎಲ್ಲಿ ಮನಕಳುಕಿರದೋ" ಎಂದು ರವೀಂದ್ರರು ಹೇಳಿದಂತೆ ಚಿತ್ತಕ್ಕೆ ಭೀತಿಯಿಲ್ಲದ ರಾಜ್ಯವೇ ಸ್ವರಾಜ್ಯ. ನಾವು ನಂಬಿಬಂದುದನ್ನು ಅಲ್ಲಗಳೆದು ಬೇರೊಂದನ್ನು ಒಬ್ಬರು ಪ್ರತಿಪಾದಿಸಿದರೆ ಅಂಥವರನ್ನು ತುಚ್ಛೀಕರಿಸುವ, ದ್ವೇಷಿಸುವ, ಪೀಡಿಸುವ ಕಾಂಕ್ಷೆ ಅನೇಕರಲ್ಲಿ ಹುಟ್ಟಬಹುದಾದರೂ ಅದನ್ನು ಅಣಗಿಸಿ, ಇತರರ ಹೇಳಿಕೆಗಳನ್ನು ಸಾವಧಾನದಿಂದ ಕೇಳಿ ಪರಿಶೀಲಿಸುವುದು ವಿದ್ಯಾವಂತರ ಲಕ್ಷಣ. ಐಹಿಕ ವಿಚಾರಗಳಲ್ಲೇ ಇಂಥ ತಾಳ್ಮೆ ಕಡಮೆ, ಧಾರ್ಮಿಕ ವಿಚಾರದಲ್ಲಿ ಇನ್ನೂ ವಿರಳ.

ಧಾರ್ಮಿಕ ವಿಚಾರಗಳಲ್ಲಿ ತಾಳ್ಮೆಯ ಪಾಠವನ್ನು ಜನರು ತಿಳಿದುದು ಜಗತ್ತಿನ ಇತಿಹಾಸದಲ್ಲಿ ತೀರ ಇತ್ತೀಚೆಗೆಂದರೂ ತಪ್ಪಾಗದು. ಯೇಸು ಕ್ರಿಸ್ತನು ಅತ್ಯುತ್ತಮ ಬೋಧನೆಗಳನ್ನು ಬೋಧಿಸಿದಾಗ ಆಗಿನ ಯೆಹೂದ್ಯರ ಹಿರಿಯರಿಗೆ ಅದು ತಪ್ಪೆಂದು ತೋರಿ ಅವನನ್ನು ಶಿಲುಬೆಗೆ ಏರಿಸಿದರಲ್ಲವೆ? ಆದರೂ ಅವನ ತತ್ವಗಳನ್ನು ಮರೆಯದೆ ಪರಿಪಾಲಿಸಿದ ಕ್ರೈಸ್ತರ ಸಂಖ್ಯೆ ದಿನೇದಿನೇ ಬೆಳೆಯಿತು. ಯೆಹೂದ್ಯರಿಂದಲೂ, ಮತ್ತೆ ರೋಮನರಿಂದಲೂ ಕ್ರೈಸ್ತರು ಚಿತ್ರ ಹಿಂಸೆಯನ್ನನುಭವಿಸಬೇಕಾಯಿತು. ಎಷ್ಟೇ ಕಷ್ಟ ಬಂದರೂ ತಾವು ಕಂಡ ಸತ್ಯವನ್ನು ಅವರು ಅಲ್ಲಗಳೆಯದೆ ಇದ್ದುದರಿಂದ ಕ್ರೈಸ್ತಮತವೇ ಬೆಳೆಯಿತು, ಪೀಡೆಕೊಟ್ಟವರೇ ಅಳಿದುಹೋದರು.

ಆದರೆ ಕ್ರೈಸ್ತರೊಳಗೆ ಪಂಥ ಭೇದಗಳು ಹುಟ್ಟಿದಾಗ ತಾವು ಕಲಿತ ಪಾಠವನ್ನು ಅವರು ಮರೆತರು. ಅಂತಃಕಲಹಗಳೂ ಧಾರ್ಮಿಕ ಯುದ್ಧಗಳೂ ಅವರಲ್ಲಿ ತೊಡಗಿದುವು. ಹಾಗಾಗಿ ಅನೇಕ ವರ್ಷಕಾಲ ಧರ್ಮದ

ಹೆಸರಲ್ಲಿ ರಕ್ತಪಾತ ಮಾಡಿ ಮಾಡಿ ಯುರೋಪಿನ ಜನರು ಧರ್ಮಸಹಿಷ್ಣುತೆಯ ಪಾಠವನ್ನು ಕಲಿತಿದ್ದಾರೆನ್ನಬಹುದು.

ಮುಹಮ್ಮದ ಪೈಗಂಬರನು ಅರಬರಿಗೆ ತಾನು ಕಂಡ ಸತ್ಯವನ್ನು ಬೋಧಿಸಿದಾಗ ಅವನನ್ನು ಅವರು ಮಕ್ಕಾ ನಗರದಿಂದ ಹೊಡೆದೋಡಿಸಿದರು. ಆದರೆ ಅವನು ತನ್ನ ಅನುಯಾಯಿಗಳ ಸೈನ್ಯವನ್ನು ಕಟ್ಟಿಕೊಂಡು ಬಂದು ಮಕ್ಕಾ ನಗರವನ್ನು ಸೇನಾಬಲದಿಂದ ವಶಪಡಿಸಿಕೊಂಡು ಇಸ್ಲಾಂ ಧರ್ಮವನ್ನು ಸ್ಥಾಪಿಸಿದನು. ನೂತನ ಧರ್ಮದಿಂದಾಗಿ ಅರಬರಲ್ಲಿ ಒಕ್ಕಟ್ಟು ಉಂಟಾದಾಗ ಅವರು ಪರ್ಶಿಯಾ ಮೊದಲಾದ ದೇಶಗಳಿಗೆ ಹೋಗಿ ಅವುಗಳನ್ನು ಗೆದ್ದು ತಮ್ಮ ಮತವನು ಹಬ್ಬಿಸಿದರು. ಭಾರತಕ್ಕೆ ಬಂದ ಮುಸ್ಲಿಮ್ ಯೋಧರು ತಮ್ಮ ರಾಜ್ಯಾಭಿಲಾಷೆಯು ಇಸ್ಲಾಮಿನ ಕೀರ್ತಿಗಾಗಿ, ಪ್ರಚಾರಕ್ಕಾಗಿ ಎಂದು ಹೊಗಳಿಕೊಳ್ಳುತ್ತಿದ್ದರು. ಮುಸ್ಲಿಂ ಮತ್ತು ಕ್ರೈಸ್ತರಾಜ್ಯಗಳೊಳಗೆ ಧರ್ಮದ ಹೆಸರಲ್ಲಿ ಅನೇಕ ಯುದ್ಧಗಳಾಗಿವೆ.

ಹೀಗೆ ಭಾರತದ ಹೊರಗೆ ಧರ್ಮದ ಹೆಸರಲ್ಲಿ ಯುದ್ಧಗಳು ಮೊನ್ನೆಮೊನ್ನೆಯ ವರೆಗೆ ನಡೆಯುತ್ತಿದ್ದರೂ ಭಾರತದೊಳಗೆ ಧಾರ್ಮಿಕ ಯುದ್ಧಗಳು ಎಂದೋ ಅದೃಶ್ಯವಾದುವು. ಆರ್ಯ ಅನಾರ್ಯರ ಯುದ್ಧಗಳ ವರ್ಣನೆಯಲ್ಲಿ ಆರ್ಯರು ಇಂದ್ರನ ಸಹಾಯದಿಂದ ಗೆದ್ದೆವೆಂದು ಹೊಗಳಿಕೊಂಡರೂ ಅನಾರ್ಯರನ್ನು ನಿರ್ನಾಮ ಮಾಡುವುದು ಅವರಿಂದ ಸಾಧ್ಯವಾಗಲಿಲ್ಲ, ಆರ್ಯ–ಅನಾರ್ಯ ಮತಗಳ ಮಿಲನವಾಯಿತು.

ಅಲ್ಲಿಂದಿಲ್ಲಿಯ ವರೆಗೆ ಬೌದ್ಧ, ಜೈನ, ಹಿಂದೂ ಮತಗಳೂ ಅವುಗಳಲ್ಲಿ ಅನೇಕಾನೇಕ ಪಂಥಗಳೂ ಹುಟ್ಟಿ ಬೆಳೆದಿವೆ. ಆದರೆ ಯಾರೊಳಗೂ ಯುದ್ಧ ಸಂಭವಿಸಿದ ಸುದ್ದಿಯಿಲ್ಲ.

ಧಾರ್ಮಿಕ ವಿಚಾರದಲ್ಲಿ ಹೀಗೆ ವ್ಯಕ್ತಿಸ್ವಾತಂತ್ರ್ಯವನ್ನು ಕೊಟ್ಟುದರಿಂದಲೇ ಪ್ರಾಚೀನ ಕಾಲದ ಋಷಿಗಳು ಯಾವ ವಿಷಯವನ್ನಾದರೂ ಹಿಂದುಮುಂದು ನೋಡದೆ ಒಪ್ಪಬೇಕೆಂದು ಹೇಳಲಿಲ್ಲ; ಪ್ರತಿಯೊಂದನ್ನೂ ವಿಚಾರದ ಒರೆಗಲ್ಲಿಗೆ ಹಚ್ಚಿ ಪರಿಶೀಲಿಸುತ್ತಿದ್ದರು.

ಹೀಗೆ ವಿಚಾರಸ್ವಾತಂತ್ರ್ಯ, ಅನ್ವೇಷಣಾಸ್ವಾತಂತ್ರ್ಯಗಳಿಂದಾಗಿ

ಭಾರತೀಯರ ಜ್ಞಾನವು ಬಹುಮುಖವಾಗಿ ಬೆಳೆದು ಬಂದಿತೆಂದು ಕೆಲವು ನಿದರ್ಶನಗಳಿಂದ ಸ್ಥಿರಪಡಿಸಬಹುದು.

ಈಗಿನ ಯುಗದಲ್ಲಿ ವಿಜ್ಞಾನದ ಮಹತ್ವ ವಿಶೇಷವಿದ್ದು ಇದನ್ನು ವಿಜ್ಞಾನದ ಯುಗವೆಂದರೆ ಒಪ್ಪುವುದು. ವಿಜ್ಞಾನದ ಯಾವ ಅಂಗವನ್ನು ಆರಿಸಿನೋಡಿದರೂ ಗಣಿತದ ತಳಹದಿಯಿಲ್ಲದೆ ವಿಜ್ಞಾನಸೌಧದ ನಿರ್ಮಾಣವು ಅಸಾಧ್ಯವೆಂದು ತಿಳಿದುಬರುವುದು. ಎಲ್ಲ ತರದ ವಿಜ್ಞಾನದ ಮೂಲಾಧಾರವಾದ ಗಣಿತದ ಸಂಖ್ಯೆಗಳನ್ನು ಬರೆಯುವಾಗ ಅನುಸರಿಸುವ ದಾಶಮಿಕ ಪದ್ಧತಿಯೇ ಗಣಿತದ ತಾಯಿಬೇರೆಂದರೆ ತಪ್ಪಾಗದು. ಯುರೋಪಿನಲ್ಲಿ ಪ್ರಚಾರದಲ್ಲಿದ್ದ ರೋಮನ್ ಅಂಕೆಗಳನ್ನು ಕೆಲವು ಗಡಿಯಾರಗಳಲ್ಲಿ ನಾವು ಈಗಲೂ ಕಾಣಬಹುದಷ್ಟೆ. ಅವನ್ನು ಉಪಯೋಗಿಸಿ ಗಂಟೆಗಳನ್ನೂ ಪುಸ್ತಕದ ಪರಿಚ್ಛೇದಗಳನ್ನೂ ಎಣಿಸಬಹುದಲ್ಲದೆ ಲಕ್ಷಗಟ್ಟಲೆಯ ಸಂಖ್ಯೆಯನ್ನು ಬರೆಯಲಾಗುವುದಿಲ್ಲ. ಇಜಿಪ್ತಿನ ಪ್ರಾಚೀನಕಾಲದ ಚಿತ್ರಲಿಪಿಯನ್ನು ನೋಡಿದರೆ ಒಂದೊಂದು ಸಂಖ್ಯೆಗೆ ಒಂದೊಂದು ಸಂಜ್ಞೆ ಇದ್ದುದರಿಂದ ಕೆಲವೇ ನೂರುಗಳನ್ನು ಗುರುತಿಸಲಿಕ್ಕೆ ಇಡೀ ಪುಟವೇ ಬೇಕಾಗುವುದು. ಇಂಥ ಸಂಜ್ಞೆಗಳಿಂದ ಗಣಿತ ಬೆಳೆಯುವುದು ಹೇಗೆ?

ಒಂಬತ್ತು ಸಂಜ್ಞೆಗಳನ್ನು ಬರೆದು ಸಂಜ್ಞೆಗಳಿಲ್ಲದ ಸ್ಥಳದಲ್ಲಿ ಶೂನ್ಯ (ಸೊನ್ನೆ) ವನ್ನು ಬರೆದು ಎಡಕ್ಕೆ ಹೋದಂತೆ ಸ್ಥಾನದ ಬೆಲೆ ಹತ್ತು ಮಡಿ ಹೆಚ್ಚುವುದೆಂದೂ ಬಲಕ್ಕೆ ಹೋದಂತೆ ಹತ್ತು ಮಡಿ ಕಡಿಮೆಯಾಗುವುದೆಂದೂ ಇಟ್ಟುಕೊಳ್ಳುವ ದಾಶಮಿಕ ಪದ್ಧತಿಯು ಆರಂಭವಾದುದು ಭಾರತದಲ್ಲಿ. ಇದನ್ನು ನಿರ್ಮಿಸಿದ ಭಾರತೀಯನ ಹೆಸರು ಗೊತ್ತಿಲ್ಲವಾದರೂ ಮನುಷ್ಯರ ಜ್ಞಾನವನ್ನು ಕಟ್ಟಿಹಾಕಿದ ಶೃಂಖಲೆಯೊಂದನ್ನು ಕಡಿದು ಗಣಿತಕ್ಕೂ ತನ್ಮೂಲಕ ವಿಜ್ಞಾನಕ್ಕೂ ಸ್ವಾತಂತ್ರ್ಯವನ್ನು ದಯೆಪಾಲಿಸಿದ ಆ ಮಹಾತ್ಮನು ಜಗದ್ವಂದ್ಯನೇ ಸರಿ.

ಈ ದಾಶಮಿಕ ಪದ್ಧತಿಯನ್ನು ಭಾರತದಿಂದ ಬಗ್ದಾದಿನ ವಿದ್ವಾಂಸರೂ ಅವರಿಂದ ಯುರೋಪಿನವರೂ ಕಲಿತರು. ಭಾರತೀಯರು

ಶೂನ್ಯವೆಂದು ಕರೆದುದನ್ನೇ ಅರಬರು ಸಿಪ್ರ ಎಂದೂ ಐರೋಪ್ಯರು ಸಾಯ್ಫರ್ ಎಂದೂ ಕರೆದರು.

"ದಾಶಮಿಕ ಪದ್ಧತಿಯಿಂದಾಗಿ ಜ್ಞಾನವನ್ನು ಕಟ್ಟಿಟ್ಟ ಬಂಧನಗಳು ಕಳಚಿದುವು. ಅಂಕಗಣಿತ, ಬೀಜಗಣಿತಗಳು ಬೆಳೆದುವು. ಭಿನ್ನರಾಶಿ—ಅದರ ಸಂಕಲನ, ವ್ಯವಕಲನ, ಮೊದಲಾದುವು ಉದಯವಾದುವು. ನಿಷ್ಪತ್ತಿ, ವರ್ಗ, ವರ್ಗಮೂಲ, ಘನ, ಘನಮೂಲ, ಧನ ಋಣ ಚಿಹ್ನೆ, ಕೋನಲಕ್ಷಣಗಳು, ವೃತ್ತಪರಿಧಿಯ ಸೂತ್ರ, ಅವ್ಯಕ್ತ ಸಂಖ್ಯೆಗಳು, ಸರಳಸಮೀಕರಣಗಳು, ವರ್ಗಸಮೀಕರಣಗಳು,—ಇವೆಲ್ಲ ಭಾರತದ ಗಣಿತಜ್ಞರ ಕೈವಶವಾದುವು" – ಹೀಗೆಂದು ಪಾಶ್ಚಾತ್ಯ ಗಣಿತಜ್ಞನೊಬ್ಬನು ವಿವರಿಸಿದ್ದಾನೆ.

ಗಣಿತ ಜ್ಞಾನದ ಹೆಚ್ಚಿನ ಭಾಗ ಗುಪ್ತರಕಾಲದಲ್ಲೂ ಅನಂತರವೂ ಸಂಪಾದಿಸಲ್ಪಟ್ಟಿದ್ದಾದರೂ ಭೂಮಿತಿ ಮತ್ತು ಜ್ಯೋತಿಷಗಳು ವೇದ ಕಾಲದಿಂದಲೂ ಅಭ್ಯಸಿಸಲ್ಪಡುತ್ತಿದ್ದುವು. ನಿಸರ್ಗವನ್ನು ಭಕ್ತಿಯಿಂದ ಪರಿಶೀಲಿಸುತ್ತಿದ್ದ ಆರ್ಯರು ಸೂರ್ಯ, ಚಂದ್ರ, ನಕ್ಷತ್ರಗಳ ಚಲನ ವಲನಗಳ ಜ್ಞಾನವನ್ನು ಸಂಪಾದಿಸಿದ್ದು ಸಹಜವೇ ಸರಿ. ಯಜ್ಞಾದಿಗಳನ್ನು ಆರಂಭಿಸಬೇಕಾದರೆ ಗ್ರಹಗಳು ಇಂತಿಂಥ ನಕ್ಷತ್ರಗಳೊಂದಿಗೇ ಇರಬೇಕೆಂಬ ನಿಯಮವಿದ್ದಿತ್ತು. ಯಜ್ಞಶಾಲೆಯಲ್ಲಿ ಇಂತಿಂಥ ಸ್ಥಳದಲ್ಲಿ ಇದೇ ರೀತಿಯ ಆಕೃತಿಗಳನ್ನು ಬರೆಯಬೇಕೆಂದೂ ನಿಶ್ಚಯ ಮಾಡಿದ್ದರು. ಸಮಕೋನತ್ರಿಕೋನದ ಕರ್ಣಕ್ಕೂ ಉಳಿದ ಭುಜಗಳಿಗೂ ಇರುವ ಸಂಬಂಧವು ಈಗ ಪಾಯ್ಥಗೊರೆಸನ ಸಿದ್ಧಾಂತವೆಂದು ಕಲಿಸಲ್ಪಡುತ್ತಿದೆಯಾದರೂ ವೇದಾಂಗಗಳಲ್ಲೊಂದಾದ ಶುಲ್ವಸೂತ್ರಗಳಲ್ಲಿ ಅದು ಉಲ್ಲೇಖಿಸಲ್ಪಟ್ಟಿದೆಯಂತೆ.

ಭಾರತೀಯ ಜ್ಯೋತಿಷಿಗಳಲ್ಲಿ ಆರ್ಯಭಟ್ಟನೇ ಮೊದಲಿಗನೆನ್ನಬಹುದು. ಭೂಮಿಯು ತನ್ನ ಅಕ್ಷದಲ್ಲಿ ತಿರುಗುತ್ತಿದೆಯೆಂಬುದು ಆರ್ಯಭಟ್ಟನಿಗೆ ಗೊತ್ತಿತ್ತು. ಗ್ರಹಣಗಳು ಉಂಟಾಗಲಿಕ್ಕೆ ಕಾರಣವೇನೆಂಬುದನ್ನೂ ಅವನು ಅರಿತಿದ್ದು ಗ್ರಹಣಗಳ ಸಂಭವವನ್ನು ಗಣಿಸುವ ಸೂತ್ರಗಳೂ ಅವನಿಗೆ ತಿಳಿದಿದ್ದುವು.

ಆರ್ಯಭಟ್ಟನ ಅನಂತರ ವರಾಹಮಿಹಿರನು ಯವನರಿಂದ ಅನೇಕ ವಿಷಯಗಳನ್ನು ತಿಳಿದುಕೊಂಡು, ಭಾರತೀಯ ಜ್ಯೋತಿಷವನ್ನು ಇನ್ನೂ ಉನ್ನತ ಸ್ಥಿತಿಗೆ ತಂದನು. ವೇದಕಾಲದ ಜ್ಯೋತಿಷ್ಯದಲ್ಲಿ ವರ್ಷ, ಉತ್ತರಾಯಣ ದಕ್ಷಿಣಾಯನ, ಮಾಸಗಳು, ತಿಥಿಗಳು ಮಾತ್ರ ಇದ್ದುವೆಂದೂ ವಾರನಾಮಗಳೂ ಮೇಷಾದಿರಾಶಿ ವರ್ಗಗಳೂ ಭಾರತದ ಹೊರಗಿನ ದೇಶಗಳಲ್ಲಿ ಹುಟ್ಟಿ ಯವನರ ಮೂಲಕ ಭಾರತದ ಜ್ಯೋತಿಷದಲ್ಲಿ ಸೇರಿದುವೆಂದೂ ಹೇಳುತ್ತಾರೆ. ನಮ್ಮ ಜ್ಯೋತಿಷಿಗಳಲ್ಲಿ ಭಾಸ್ಕರಾಚಾರ್ಯನ ಅನಂತರ ಪ್ರಸಿದ್ಧರಾದವರಿಲ್ಲವೆನ್ನಬಹುದು. ಭಾಸ್ಕರಾಚಾರ್ಯನ ಲೀಲಾವತಿ ಎಂಬ ಗಣಿತ ಪುಸ್ತಕವು ಆ ಕಾಲದ ವಿದ್ಯಾರ್ಥಿಗಳ ಪಠ್ಯ ಪುಸ್ತಕವೆನ್ನಲೂಬಹುದು.

ತರ್ಕಶಾಸ್ತ್ರವು ಭಾರತೀಯರ ವಿದ್ಯಾಂಗಗಳಲ್ಲಿ ಮುಖ್ಯವಾಗಿತ್ತು. ಪ್ರತಿಯೊಂದು ಪ್ರಶ್ನೆಯನ್ನೂ ಬಿಡಿಸಿ, ವರ್ಗೀಕರಿಸಿ, ತರ್ಕಿಸಿ, ನಿರ್ಣಯಿಸುವ ರೀತಿಯನ್ನು ಅವರು ನಿಶ್ಚಯಿಸಿದ್ದರು. ಹೀಗಾಗಿ ಯಾವ ವಿಷಯವೆತ್ತಿದರೂ ಅದರಲ್ಲಿ ವರ್ಗೀಕರಣ, ಸೂಕ್ಷ್ಮವಾದ ಆಂತರಿಕ ಭೇದಗಳನು ಕಂಡುಹಿಡಿಯುವಿಕೆ ಇವು ಅಗತ್ಯವಿದ್ದುವು. ಕಾವ್ಯದ ಪ್ರಶ್ನೆ ಬಂದರೆ ಛಂದೋಲಕ್ಷಣ, ಅಲಂಕಾರ ಶಾಸ್ತ್ರಗಳು; ನಾಟಕದ ಮಾತೆತ್ತಿದ್ದರೆ ನಾಟಕ ಲಕ್ಷಣ, ನಾಯಕ–ನಾಯಿಕಾ ಭೇದ ಮೊದಲಾದ ವಿಚಾರ; ಸಂಗೀತವೆಂದೊಡನೆ ಸಪ್ತಸ್ವರಗಳು, ಮೇಳಕರ್ತಗಳು ತಾಳ, ಲಯಗಳ ವಿವರ; ವಾಸ್ತುಶಿಲ್ಪಕ್ಕೊಂದು ಶಾಸ್ತ್ರ, ಪ್ರತಿಮೆ ಮಾಡುವವರಿಗೊಂದು ಪ್ರತಿಮಾ ಲಕ್ಷಣ; ಏನೇನು ಕಲೆಗಳಿದ್ದವೋ ಅವುಗಳಿಗೆಲ್ಲ ಶಾಸ್ತ್ರೀಯವಾದ ಹಿನ್ನೆಲೆಯನ್ನು ಕೊಟ್ಟು ಕ್ರಮಬದ್ಧವಾಗಿರುವಂತೆ ಮಾಡಿದ್ದಾರೆ. ವ್ಯಾಕರಣದಲ್ಲಂತೂ ಪಾಣಿನಿಯು ಪ್ರತಿಯೊಂದು ಶಬ್ದದ ಮೂಲವನ್ನೂ ಹುಡುಕಿ ಅದಕ್ಕೆ ತಕ್ಕ ನಿಯಮವನ್ನು ನಿರ್ದೇಶಿಸಿ ಜಗತ್ತಿನ ವೈಯಾಕರಣಿಗಳಿಗೆ ಮಾರ್ಗದರ್ಶಕನಾಗಿದ್ದಾನೆ.

ಆದರೆ, ವಾಸ್ತುಶಿಲ್ಪ, ಮೂರ್ತಿ ರಚನೆ, ಸಂಗೀತಗಳು ಹರ್ಷನ ಅನಂತರವೂ ಮುಸ್ಲಿಮ್ ರಾಜರ ಕಾಲದಲ್ಲೂ ಮುಂದರಿಯುತ್ತ ಬಂದುವಾದರೂ ಶಾಸ್ತ್ರದ ಬೆಳವಣಿಗೆ ಜ್ಞಾನದ ವೃದ್ಧಿಗಳು ನಿಂತಂತಾ

ದುವು. ಉಚ್ಚ ಶಿಕ್ಷಣವು ಕೆಲವೇ ಜಾತಿಗಳ, ಅನಂತರ ಕೆಲವೇ ಮನೆತನಗಳ ಸೊತ್ತಾಗಿ ಉಳಿದು ಹಿಂದಿನ ಗ್ರಂಥಗಳಿಗೂ ಶಾಸ್ತ್ರಗಳಿಗೂ ಟೀಕೆ ಬರೆಯುವುದು, ಇವುಗಳ ಅಂಧಾನುಕರಣೆಯಿಂದ ನಿರ್ಜೀವ ಸಾಹಿತ್ಯ ರಚಿಸುವುದು-ಇವೇ ವಿದ್ಯಾವಂತರ ಉದ್ಯೋಗಗಳಾದುವು. ಅವಿದ್ಯಾವಂತರಾದ ಶಿಲ್ಪಿಗಳು ಹಿರಿಯರು ಹಾಕಿಕೊಟ್ಟ ದಾರಿಯನ್ನೇ ತುಳಿದು ಮುನ್ನಡೆಯಬೇಕಾಯಿತಲ್ಲದೆ ನವೀನ ಆಕೃತಿ, ರೂಪಗಳನ್ನು ನಿರ್ಮಿಸಲು ಹೆದರಿದರು.

ಪಾಶ್ಚಾತ್ಯ ವಿದ್ಯೆಯ ಸಂಪರ್ಕದಿಂದ ತಿರುಗಿ ಎಲ್ಲ ವಿಷಯಗಳಲ್ಲಿ ಪ್ರಶ್ನಿಸುವ, ಹೊಟ್ಟು-ಹುರುಳೆಂದು ವಿಮರ್ಶಿಸುವ, ಮಾನಸಿಕತೆ ಬೆಳೆಯಿತು. ಆರಂಭದಲ್ಲಿ ಈ ವಿಮರ್ಶೆಯ ಫಲವಾಗಿ ಪ್ರಾಚೀನ ಭಾರತದ ಮತ, ಆಚಾರ, ಸಾಹಿತ್ಯಗಳೆಲ್ಲ ಕಟು ಟೀಕೆಗೆ ಗುರಿಯಾದುವಾದರೂ ಪಾಶ್ಚಾತ್ಯ ವಿದ್ವಾಂಸರೇ ಸಂಸ್ಕೃತ, ವೇದ, ಕಲೆಗಳ ಕುರಿತು ಹೊಗಳುವುದನ್ನು ಕೇಳಿ ಅವುಗಳ ನಿಜವಾದ ಬೆಲೆ ನಿಶ್ಚಯಿಸುವ ಪ್ರಯತ್ನಗಳಾದುವು. ವಿಜ್ಞಾನದಲ್ಲೂ ಮುಂದಡಿಯಿಟ್ಟು ಜಗದೀಶಚಂದ್ರಬಸು, ಪ್ರಫುಲ್ಲಚಂದ್ರ ರೋಯ್ ಇವರು ಮೊತ್ತಮೊದಲಿಗರಾಗಿ ಭಾರತಕ್ಕೊಂದು ಸ್ಥಾನ ಗಳಿಸಿದರು. ಈಗ ರಾಮನ್, ಭಾಬಾ, ಭಾಟನಗರ್ ಮೊದಲಾದವರು ನಮ್ಮ ಸ್ಥಾನವನ್ನೇರಿಸಿದ್ದಾರೆ. ಆದರೆ ದೇಶದ ಜನಸಂಖ್ಯೆಯನ್ನೂ ಮೇಧಾವಿಗಳ ಸಂಖ್ಯೆಯನ್ನೂ ಹೋಲಿಸಿದರೆ ಕೊಡತುಂಬ ಹಾಲು ಕರೆಯಬೇಕಿದ್ದ ದನ ಹನಿಹಾಲು ಕೊಟ್ಟಂತಾಗಿದೆ.

ಕಲೆಯು ಕಲೋಪಾಸನೆಗಾಗಿ, ಜ್ಞಾನವು ಜ್ಞಾನೋಪಾಸನೆಗಾಗಿ ಹೊರತು ಸಮಸ್ಯಾಪರಿಹಾರಕ್ಕಲ್ಲ ಎಂದು ವಾದಿಸುವ ಪಂಗಡವೊಂದಿದೆ. ಜನತೆಯ ಮುಂದಿರುವ ಪ್ರಶ್ನೆಗಳನ್ನು ಬಿಡಿಸುವ ಉದ್ದೇಶವಿಟ್ಟುಕೊಳ್ಳದ ಜ್ಞಾನ ಇಂದ್ರಜಾಲದಂತಾಗಿ ಬರಡೆಮ್ಮೆಯಂತಾಗುವುದೆಂದೂ ಇಜಿಪ್ತಿನ ಇತಿಹಾಸದಿಂದ ಈ ಪಾಠ ಕಲಿಯಬಹುದೆಂದೂ ಹೊರಾಬಿನ್ ಮೊದಲಾದ ವಿದ್ವಾಂಸರು ಅಭಿಪ್ರಾಯ ವ್ಯಕ್ತಮಾಡಿದ್ದಾರೆ. ಸಾಹಿತ್ಯವು ಸಾಹಿತ್ಯಕ್ಕಾಗಿ, ಸಾಹಿತ್ಯವು ಸಮಾಜೋದ್ಧಾರಕ್ಕಾಗಿ ಎನ್ನುವ ಚರ್ಚೆಯ ರೀತಿಯೇ ಇದು. ಸರಿಯಾಗಿ ವಿಚಾರಿಸಿ ನೋಡಿದರೆ ಫಲಾಪೇಕ್ಷೆಯಿಲ್ಲದೆ ಸತ್ಯಾ

ನ್ವೇಷಣವನ್ನೇ ಗುರಿಯಾಗಿಟ್ಟುಕೊಂಡ ವಿಜ್ಞಾನವೂ ಶೋಧನೆಗಳಿಂದ ಜನರ ಜೀವನವನ್ನು ಉತ್ತಮಗೊಳಿಸುವ ಪ್ರಯೋಗಗಳೂ ವಿಜ್ಞಾನಿಯ ಎರಡು ಭುಜಗಳಂತಿವೆ. ಎರಡೂ ಒಂದೇ ರೀತಿಯಲ್ಲಿ ಬೆಳೆಯದಿದ್ದರೆ ಅಂಗಹೀನವಾದಂತಾಗುವುದು. ವಿಜ್ಞಾನದ ಚರಿತ್ರೆಯನ್ನೋದಿದರೆ ಕೆಲವು ಶೋಧನೆಗಳು ಏನಾದರೊಂದು ತೋರಿಕೆಯ ಹಿಂದಿರುವ ಸತ್ಯವನ್ನು ಅನ್ವೇಷಿಸಿ ಹೋಗುವುದರಿಂದಲೂ ಇನ್ನು ಹಲವು ಜನರೆದುರಿರುವ ಪ್ರಶ್ನೆಗಳನ್ನು ಬಿಡಿಸುವ ಯತ್ನದಿಂದ ಆದವುಗಳೆಂದೂ ತಿಳಿದುಬರುತ್ತದೆ.

ಭಾರತೀಯರು ಬರೀ ಪರಮಾರ್ಥ ವಿಚಾರದಲ್ಲಿ ಮಾತ್ರ ಮಗ್ನರಾಗಿದ್ದಿಲ್ಲವೆಂದು ತಿಳಿದರೂ ಸಾಲದು. ಜನಜೀವನಕ್ಕೆ ಸಂಬಂಧಪಟ್ಟ ಅನ್ನ, ವಸ್ತ್ರ, ಆರೋಗ್ಯಗಳಿಗೆ ಗಮನವಿತ್ತಿದ್ದಾರೆಯೋ ಎಂಬುದನ್ನೂ ವಿಚಾರ ಮಾಡಬೇಕು.

ಮಾನವರ ಇತಿಹಾಸದಲ್ಲಿ ಕಾಡಾಡಿಗಳಾಗಿದ್ದವರು ಒಂದೇ ಸ್ಥಳದಲ್ಲಿ ನೆಲೆನಿಂತು ಬೇಸಾಯಮಾಡಿ, ಪಶುಗಳನ್ನು ಪಾಲಿಸಿ ಜೀವನ ಸಾಗಿಸುವ ಸ್ಥಿತಿಯನ್ನು ಮುಟ್ಟಿದ್ದು ಮಹತ್ವದ ಹಂತವನ್ನು ಏರಿದಂತಾಯಿತೆಂದು ಗಣಿಸಲ್ಪಟ್ಟಿದೆ. ಮೊಹೆಂಜೊಡರೋವಿನ ಅವಶೇಷಗಳನ್ನು ಪರಿಶೀಲಿಸಿದರೆ ಚರಿತ್ರಕಾಲದ ಮುಂಬೆಳಗು ಹರಿಯುವ ಮೊದಲೇ ಭಾರತದಲ್ಲಿ ಗೋಧಿ, ಜವೆಗೋಧಿಗಳ ಕೃಷಿಯು ಮುಖ್ಯೋದ್ಯೋಗವಾಗಿತ್ತೆಂದೂ ದನಕರುಗಳನ್ನೂ ಕುದುರೆಗಳನ್ನೂ ಜನರು ಸಾಕಿಕೊಂಡಿದ್ದರೆಂದೂ ಕಂಡುಬರುತ್ತದೆ. ಜಗತ್ತಿನ ಇತರ ದೇಶಗಳವರೂ ಗೋಧಿ, ಭತ್ತ, ಜೋಳ ಮೊದಲಾದ ಏಕದಳಗಳು ಆಹಾರಯೋಗ್ಯವೆಂದು ಕಂಡು ಹಿಡಿದು ಅವನ್ನೇ ಕೃಷಿಮಾಡಿ, ಉತ್ತಮವಿದ್ದುದನ್ನೇ ಆರಿಸುತ್ತ ಬಂದು ಧಾನ್ಯಗಳ ಗಾತ್ರ, ರುಚಿ, ಸಮೃದ್ಧಿಗಳನ್ನು ಹೆಚ್ಚಿಸಿದ್ದಾರೆ. ಭಾರತೀಯರು ಅದೇ ರೀತಿ ಮಾಡಿದ್ದಾರೆ ಮಾತ್ರವಲ್ಲ ಇತರ ಯಾವ ದೇಶದವರೂ ಆರಿಸಿ ಬೆಳೆಸಿದ ದ್ವಿದಳ ಧಾನ್ಯಗಳಿಗಿಂತ ಹತ್ತು ಪಾಲು ಧಾನ್ಯಗಳ ಜಾತಿಗಳನ್ನು ಬೆಳೆಸಿ ಪೌಷ್ಟಿಕ ಆಹಾರ ಒದಗುವಂತೆ ಮಾಡಿದ್ದಾರೆ.

ಕಬ್ಬನ್ನು ಬೆಳೆಸಿ ಸಕ್ಕರೆಯನ್ನು ಮಾಡುವುದು ಆರಂಭವಾದುದೇ ಭಾರತದಲ್ಲಿ. ಐರೋಪ್ಯ ವರ್ತಕರು ಇಲ್ಲಿಂದ ಇಂಗ್ಲಾಂಡಿಗೆ ಸಕ್ಕರೆ

ಯನ್ನು ಒಯ್ಯುವ ವರೆಗೆ ಅಲ್ಲಿ ಜೇನೇ ಸಿಹಿಯ ಮೂಲ ವಸ್ತುವಾಗಿತ್ತು. ಹದಿನಾರನೇ ಶತಮಾನದ ಆಂಗ್ಲ ಸಾಹಿತ್ಯದಲ್ಲಿ ಸಹ ಜೇನಿನ ಉಲ್ಲೇಖವಿದೆ ಹೊರತು ಸಕ್ಕರೆಯ ಸುದ್ದಿಯಿಲ್ಲ. ಭಾರತೀಯರಿಟ್ಟ ಶರ್ಕರಾ, ಸಾಖರ ಸಕ್ಕರೆ ಎಂಬ ನಾಮಭೇದವೇ ಇಂಗ್ಲಿಷಿನಲ್ಲಿ ಶ್ಯುಗರ್ ಎಂದಾಗಿದೆ. ಭತ್ತದ ಬೆಳೆ ಚೀನಾದವರಿಗೆ ಸಹ ಗೊತ್ತಿದ್ದರೂ ಪಾಶ್ಚಾತ್ಯರಿಗೆ ದಕ್ಷಿಣ ಭಾರತದಲ್ಲೇ ಅದರ ಪರಿಚಯವಾದುದು; ತಮಿಳಿನ ಅರಿಸಿ, ತುಳುವಿನ ಅರಿ ಇಂಗ್ಲಿಷಿನಲ್ಲಿ ರಾಯ್ಸ್ ಎನಿಸಿದೆ.

ಹತ್ತಿಯಿಂದ ನೂಲನ್ನು ಮಾಡಿ ವಸ್ತ್ರ ಮಾಡುವ ಕೈಗಾರಿಕೆಯ ಮೂಲ ಭಾರತದೇಶ. ಅತೀ ಪ್ರಾಚೀನ ಕಾಲದಿಂದಲೂ ವಸ್ತ್ರದ ಕೈಗಾರಿಕೆ ಇಲ್ಲಿ ಬೆಳೆದುಬಂದಿದೆ. ಗ್ರೀಕರು ಅಲೆಕ್ಸಾಂಡರನೊಡನೆ ಇಲ್ಲಿಗೆ ಬಂದು ಹತ್ತಿಯನ್ನೂ ಬಟ್ಟೆಯನ್ನೂ ಕಂಡು ತಮ್ಮ ನಾಡಿಗೆ ಮರಳಿದಾಗ "ಇಂಡಿಯಾದ ಒಂದು ಮರದಲ್ಲಿ ಚಿಕ್ಕ ಚಿಕ್ಕ ಕುರಿಗಳು ಹುಟ್ಟುತ್ತವೆ. ಅವುಗಳ ಉಣ್ಣೆಯಿಂದ ಜನರು ಬಟ್ಟೆಯನ್ನು ಮಾಡುತ್ತಾರೆ" ಎಂದು ಬಣ್ಣಿಸಿದರಂತೆ. ಐರೋಪ್ಯ ವ್ಯಾಪಾರಿಗಳು ಕಲ್ಲಿಕೋಟೆಯಿಂದ ಒಯ್ಯುತ್ತಿದ್ದ ಬಟ್ಟೆಗೆ ಕ್ಯಾಲಿಕೋ ಎಂದು ಹೆಸರಾಯಿತು. ಡಾಕ್ಕಾ ಮೊದಲಾದ ಬಂದರುಗಳಿಂದ ರಫ್ತಾಗುತ್ತಿದ್ದ ಮಸ್ಲಿನ್ ಬಟ್ಟೆಯು ಬಹಳ ತೆಳುವಾಗಿಯೂ ಆಕರ್ಷಕವಾಗಿಯೂ ಇತ್ತು. ಇಂಗ್ಲಾಂಡಿನಲ್ಲಿ ಗಿರಣಿಗಳು ಸ್ಥಾಪಿತವಾದಾಗ ನಮ್ಮ ಗುಡಿಕೈಗಾರಿಕೆಗೆ ಆಘಾತವಾಯಿತಲ್ಲದೆ ಪರದೇಶದಿಂದ ಬಟ್ಟೆಯನ್ನು ಇಲ್ಲಿಗೆ ಆಯಾತ ಮಾಡುವ ಸ್ಥಿತಿ ಬಂದಿತ್ತು. ಇತ್ತೀಚೆಗೆ ನಮ್ಮಲ್ಲಿನ ಗಿರಣಿಗಳಿಗೆ ಸರಕಾರದ ಆಶ್ರಯ ಸಿಕ್ಕಿದುದರಿಂದಲೂ ಜನರಲ್ಲಿ ಸ್ವದೇಶೀ ಪ್ರೇಮ ಬೆಳೆದುದರಿಂದಲೂ ವಸ್ತ್ರದ ಆಯಾತ ಕಡಿಮೆಯಾಗಿದೆ.

ಮನುಷ್ಯದೇಹದ ರಚನೆ, ನಾಡಿಗಳ ಬಡಿತಕ್ಕೂ ರಕ್ತಚಲನೆಯೇ ಮೊದಲಾದ ಒಳಗಿನ ಕ್ರಿಯೆಗಳಿಗೂ ಇರುವ ಸಂಬಂಧಗಳನ್ನು ಕಂಡುಹಿಡಿದು ಬೇರೆ ಬೇರೆ ರೋಗಗಳ ಲಕ್ಷಣಗಳನ್ನು ವಿವರಿಸಿ ನಮ್ಮಲ್ಲಿ ಸಿಕ್ಕುವ ಗಿಡಮೂಲಿಕೆಗಳಿಂದಲೂ ಲೋಹಾದಿಗಳಿಂದಲೂ ಉತ್ತಮ ಔಷಧಗಳನ್ನು ಸೂಚಿಸುವ ಜ್ಞಾನ ವಿಶೇಷ ಆಯುರ್ವೇದವೆಂದು ಎನಿಸಿದೆ. ಪ್ರಾಚೀನ ಕಾಲದ ಚರಕ (ಕಣಿಷ್ಕನ ಸಮಕಾಲೀನ?), ಸುಶ್ರುತರ ಗ್ರಂಥ

ಗಳನ್ನನುಸರಿಸಿ ಈಗಲೂ ದೇಶೀಯ ವೈದ್ಯರು ಅನೇಕ ಮಂದಿ ರೋಗಿಗಳನ್ನು ಗುಣಪಡಿಸುವುದನ್ನು ನಾವು ಕಾಣುತ್ತಿದ್ದೇವೆ. ರೋಗಗಳ ಮೂಲಕಾರಣವು ದೇಹದಲ್ಲಿನ ವಿವಿಧ ರಸ, ವಾಯುಗಳ ಸಮತೋಲವು ತಪ್ಪುವುದೇ ಎಂದು ಆಯುರ್ವೇದದಲ್ಲಿ ಹೇಳಿದಂತೆ ಯುರೋಪಿನಲ್ಲೂ ನಂಬಿಬಂದಿದ್ದರು. ರೋಗಾಣುಗಳಿಂದಲೇ ಎಲ್ಲಾ ರೋಗಗಳು ಉಂಟಾಗುವುವೆಂದು ಪಾಶ್ಚರ್ ಮೊದಲಾದ ಪಾಶ್ಚಾತ್ಯರು ಬೋಧಿಸಿದ ತರುವಾಯ ಅಲ್ಲಿನ ಕ್ರಮದಲ್ಲಿ ವ್ಯತ್ಯಾಸವಾಗಿದೆ, ಇಲ್ಲಿ ಹಿಂದಿನ ನಂಬಿಗೆಯೇ ಉಳಿದಿದೆ. ರೋಗಾಣುಗಳು ಕಾರಣವಾದರೂ ಮನುಷ್ಯ ದೇಹದ ಸ್ಥಿತಿಗತಿಗಳನ್ನು ಹೊಂದಿ ಅವುಗಳಿಂದ ಹಾನಿಯಾಗುತ್ತದೆಂಬ ಇತ್ತೀಚೆಗಿನ ನಿರ್ಣಯದಲ್ಲಿ ಎರಡೂ ತತ್ವಗಳ ಸಮನ್ವಯವನ್ನು ನಾವು ಕಾಣಬಹುದು. ಪ್ರಾಚೀನ ಕಾಲದಲ್ಲಿ ಶಸ್ತ್ರಕ್ರಿಯೆಯನ್ನು ವೈದ್ಯರು ಮಾಡುತ್ತಿದ್ದರೆಂಬುದಕ್ಕೆ ಅನೇಕ ಆಧಾರಗಳು ದೊರಕಿವೆ. ಆದರೆ ಹೆಣವನ್ನು ಮುಟ್ಟುವುದೆಂದರೆ ಭ್ರಷ್ಟಾಚಾರ, ಪ್ರಾಣಿವಧೆಯೆಂದರೆ ಹಿಂಸೆ, ಎಂಬ ಭಾವನೆಗಳೇ ಬೆಳೆದು ಬಂದುದರಿಂದ ದೇಹರಚನೆಯನ್ನು ಅಭ್ಯಾಸಮಾಡುವುದು ಕಡಿಮೆಯಾಯಿತು— ಶಸ್ತ್ರಕ್ರಿಯೆಯೂ ನಿಂತು ಹೋಯಿತು.

ಮನುಷ್ಯರ ವಿಷಯ ಶೋಧನೆಗಳನ್ನು ನಡೆಸಿದಂತೆ ಆನೆ, ಕುದುರೆ, ದನಕರುಗಳ ಕುರಿತು ಶೋಧಿಸಿ ಗಜಶಾಸ್ತ್ರ, ಅಶ್ವಶಾಸ್ತ್ರಾದಿಗಳನ್ನೂ ಪ್ರಾಚೀನ ಕಾಲದವರು ರಚಿಸಿದ್ದರು.

ಮೊಹೆಂಜೊಡರೋವಿನ ಅವಶೇಷಗಳಲ್ಲಿ ಕಲ್ಲಿನ ಆಯುಧಗಳೂ ಸಲಕರಣೆಗಳೂ ಇವೆ, ಕಂಚು ಹಿತ್ತಾಳಿ ತಾಮ್ರದ ಆಯುಧ, ಪಾತ್ರೆಗಳೂ ಇವೆ. ಕಬ್ಬಿಣದ ಉಪಯೋಗ ಅನೇಕ ವರ್ಷಗಳ ಅನಂತರ ಕಂಡು ಹಿಡಿದದ್ದು. ಕಬ್ಬಿಣದ ಅದುರಿನಿಂದ ಉತ್ತಮ ತರದ ಕಬ್ಬಿಣವನ್ನು ತಯಾರಿಸುತ್ತಿದ್ದರೆನ್ನುವುದಕ್ಕೆ ಢಿಲ್ಲಿ ನಗರದ ಹತ್ತಿರದಲ್ಲಿರುವ ಸ್ತಂಭವೇ ಸಾಕ್ಷಿ. ಶತಮಾನಗಳು ಉರುಳಿದರೂ ಆ ಸ್ತಂಭಕ್ಕೆ ತುಕ್ಕು ಹಿಡಿದಿಲ್ಲ.

ಕೃಷಿಯೂ, ಕೈಗಾರಿಕೆಗಳೂ ಬೆಳೆದಂತೆ ವ್ಯಾಪಾರದ ವಹಿವಾಟುಗಳೂ ಬೆಳೆದುವು. ಆರಂಭದಲ್ಲಿ ಊರ ಜಾತ್ರೆ ಅಥವ ಸಂತೆಗಳಲ್ಲಿ ಮಾತ್ರ ಕೊಡು

ಕೊಳ್ಳುವ ವ್ಯವಹಾರ ನಡೆದು ಕ್ರಮೇಣ ಪೇಟೆಗಳೂ ಬಂದರು ಸ್ಥಳಗಳೂ ಬೆಳೆದು ಪರದೇಶಗಳೊಡನೆ ಸಹ ವ್ಯಾಪಾರವು ವೃದ್ಧಿಯಾಯಿತು. ಅರಬರು, ರೋಮನರು, ಇಜಿಪ್ಟಿನವರು ಇಲ್ಲಿಗೆ ಬಂದು ಇಲ್ಲಿಂದ ಬಟ್ಟೆ, ಗಂಧ, ತೇಗಿನ ಮರ, ಪರಿಮಳ ದ್ರವ್ಯ, ಸಾಂಬಾರ ಜೀನಸು ಮೊದಲಾದುವುಗಳನ್ನು ಕೊಂಡುಕೊಂಡು ಚಿನ್ನ ಮೊದಲಾದುವನ್ನು ಕೊಡುತ್ತಿದ್ದರೆಂದು ಅಲ್ಲಲ್ಲಿ ಈಗಲೂ ಗೋಚರಕ್ಕೆ ಬರುವ ಪರದೇಶಗಳ ನಾಣ್ಯಗಳಿಂದ ತಿಳಿಯಬಹುದು.

ದೇಶದ ಸಂಪತ್ತು ಸಮೃದ್ಧಿಯಾಗದೆ ಕಲೆಗಳಿಗೆ ಪ್ರೋತ್ಸಾಹವೂ ಇಲ್ಲ, ವಿದ್ಯೆಗೆ ಆಶ್ರಯವೂ ಇಲ್ಲ. ಕೃಷಿ, ಕೈಗಾರಿಕೆ, ವ್ಯಾಪಾರಗಳಲ್ಲಿ ಐರೋಪ್ಯರು ನಮ್ಮನ್ನು ಹಿಂದೆ ತಳ್ಳಿ ಮುಂದರಿದ ದಿನದಿಂದ ದೇಶದ ಬಡತನವು ಕಠಿನವಾಗುತ್ತ ಬಂದು ಜ್ಞಾನಪಿಪಾಸೆ, ಕಲಾಭಿಮಾನ, ಸಾಹಿತ್ಯಾಭಿರುಚಿ — ಎಲ್ಲವೂ ಮೃತಪ್ರಾಯವಾದುವು.

# ೮. ಬೃಹದ್ಭಾರತ ದರ್ಶನ

"ಇಂಗ್ಲಾಂಡಿನ ಪರಿಚಯ ಮಾತ್ರ ಇದ್ದವನಿಗೆ ಇಂಗ್ಲಾಂಡಿನ ಸಂಪೂರ್ಣ ಪರಿಚಯ ಹೇಗೆ ಆದೀತು?" ಎಂದು ಆಂಗ್ಲ ಕವಿಯೊಬ್ಬನು ಪ್ರಶ್ನಿಸಿದ್ದಾನೆ. ಒಂದು ದೇಶದ ನಿಜವಾದ ಮಹತ್ವ ಘನತೆಗಳು ತಿಳಿಯಬೇಕಾದರೆ ಅವುಗಳು ಆ ದೇಶದ ಮೇರೆಗಳನ್ನು ಮೀರಿ ಜಗತ್ತಿನ ದೇಶ ವಿದೇಶಗಳಲ್ಲೂ ತಮ್ಮ ಪ್ರಭಾವವನ್ನು ಬೀರಬೇಕೆಂಬುದೇ ಅವನ ಪ್ರಶ್ನೆಗೆ ಆತನು ಅಪೇಕ್ಷಿಸುವ ಉತ್ತರ. ಭಾರತದ ದರ್ಶನದ ಭವ್ಯತೆಯನ್ನು ಸಂಪೂರ್ಣವಾಗಿ ಗ್ರಹಿಸಬೇಕಾದರೆ ಭಾರತಕ್ಕೂ ಇತರ ದೇಶಗಳಿಗೂ ಇದ್ದ ಸಂಬಂಧವನ್ನೂ ಭಾರತೀಯರು ಪರದೇಶಗಳಿಗೆ ಹೋಗಿ ನೆಲೆನಿಂತು ರಾಜ್ಯಗಳನ್ನು ಸ್ಥಾಪಿಸಿ ತಮ್ಮ ಸಂಸ್ಕೃತಿಯನ್ನು ಜಗತ್ತಿನಲ್ಲೇ ಬಿತ್ತಿದ ಬೃಹದ್ಭಾರತದ ಕತೆಯನ್ನೂ ಕೇಳಬೇಕು.

ಮೇಲಿಂದ ಮೇಲೆ ನೋಡುವವರಿಗೆ ಭಾರತಕ್ಕೆ ಉತ್ತರದಲ್ಲಿ ಹಿಮಾಲಯ, ಉಳಿದ ದಿಕ್ಕುಗಳಲ್ಲಿ ಮಹಾಸಾಗರಗಳಿದ್ದು ಒಂದು ರೀತಿಯ ದಿಗ್ಬಂಧನವಾಗಿದೆಯೆಂದೂ ಇಲ್ಲಿನ ಜನರಿಗೂ ಉಳಿದ ಜಗತ್ತಿಗೂ ಸಂಪರ್ಕವಾಗುವ ಸುಲಭದ ದಾರಿಯಿಲ್ಲವೆಂದೂ ಕಾಣಬಹುದು. ಅತ್ಯುನ್ನತ ಪರ್ವತಶ್ರೇಣಿ ಮತ್ತು ಮಹಾಸಾಗರಗಳಿಂದಾಗಿ ಭಾರತಕ್ಕೊಂದು ಸ್ಥಿರವಾದ ಗಡಿಯುಂಟಾಗಿದೆ. ಭಾರತದ ಒಳಗಿರುವ ಜನರೆಲ್ಲ, ದೊಡ್ಡದೊಂದು ಕಡಾಯಿಯಲ್ಲಿ ಅತ್ತಿತ್ತ ಮಗುಚಲ್ಪಟ್ಟ ಭಕ್ಷ್ಯವಸ್ತುಗಳು ಬೆರೆತು ಒಂದೇ ಪಾಕವಾದಂತೆ ಒಂದೇ ಜನಾಂಗವಾಗುವಂತಾಗಿದೆ. ವಿಶಾಲವಾದೊಂದು ಭೂಖಂಡದಂತಿದ್ದರೂ ಜನಾಂಗದಲ್ಲಿ ಏಕರೂಪತೆ ಬರಲು ಈ ಸ್ಥಿರವಾದ ಮೇರೆಗಳು ಸಹಾಯಕವಾಗಿವೆ.

ಆದರೆ ಆ ಮೇರೆಗಳನ್ನು ಮೀರಿದವರಿಲ್ಲವೆಂದಿಲ್ಲ. ಭೂಮಾರ್ಗಗಳನ್ನೇ ಮೊದಲಾಗಿ ಆರಿಸಿದರೆ ವಾಯುವ್ಯದ ಕಣಿವೆಗಳಿಂದ ಆರ್ಯರ ಕಾಲದಿಂದ ಥಿಲ್ಲಿ ಬಾದಶಹರ ಕಡೆಗಾಲದಲ್ಲಿ ಬಂದ ನಾದಿರ ಶಹನ ವರೆಗೆ

ಅನೇಕಾನೇಕ ಯೋಧರೂ ಜನಸಮುದಾಯಗಳೂ ಇಲ್ಲಿಗೆ ಬಂದಿವೆ ಯೆಂದು ಇತಿಹಾಸ ದರ್ಶನದಲ್ಲಿ ಕಂಡಿದ್ದೇವೆ. ಅದೇ ಮಾರ್ಗವಾಗಿ ಭಾರತೀಯರು ಹೊರನಾಡುಗಳಿಗೆ ಹೋಗುತ್ತಿದ್ದರು, ಭಾರತೀಯ ಧರ್ಮ ಸಂಸ್ಕೃತಿಗಳನ್ನು ಪರದೇಶಗಳಲ್ಲಿ ಬಿತ್ತಿದ್ದರು ಎಂದರೆ ಅನೇಕ ರಿಗೆ ಆಶ್ಚರ್ಯವಾಗಬಹುದು.

ವಾಯುವ್ಯ ದಿಕ್ಕಿನ ಕಣಿವೆಗಳಿಂದ ಜನಸಂದಣಿ ಅತ್ತಿತ್ತ ಪ್ರಯಾಣಿ ಸುವ ಮೊದಲೇ ಜಲಮಾರ್ಗವಾಗಿ ಭಾರತಕ್ಕೂ ಇತರ ದೇಶಗಳಿಗೂ ವ್ಯವ ಹಾರ ವಿತ್ತೆಂದು ಮೊಹೆಂಜೊಡರೋವಿನ ಸಂಸ್ಕೃತಿಯನ್ನು ಪರಿಶೀಲಿಸಿದ ವರು ಹೇಳುತ್ತಾರೆ. ಮಧ್ಯಪೂರ್ವ ಯುಫ್ರಾಟಿಸ್ ಮತ್ತು ಟಾಯ್‌ಗ್ರೀಸ್ ನದಿಗಳ ತೀರದಲ್ಲಿ ವಾಸಿಸುತ್ತಿದ್ದ ಜನರಿಗೂ ಮೊಹೆಂಜೊಡರೋವಿನ ವರಿಗೂ ಸಂಪರ್ಕವಿತ್ತೆಂದು ಅವರ ವೇಷಭೂಷಣಗಳು, ಬೊಂಬೆ ಗಳು, ಚಿತ್ರಗಳು— ಇವನ್ನು ಹೋಲಿಸಿ ನೋಡಿದರೆ ತಿಳಿಯುವುದು. ಪ್ರಾಚೀನ ಭಾರತದ ಪಂಚಾಂಗಕ್ಕೂ ಬೆಬಿಲೋನಿಯಾದವರ ಪಂಚಾಂ ಗಕ್ಕೂ ಸಾಮ್ಯವಿರುವುದನ್ನು ಕಂಡರೆ ಅವರಲ್ಲಿ ಪರಸ್ಪರ ಜ್ಞಾನದ ಕೊಡು ಕೊಳ್ಳುವಿಕೆಯು ನಡೆಯುತ್ತಿತ್ತೆಂದು ಊಹಿಸಬಹುದು.

ಭಾರತ ಮತ್ತು ಇರಾನು (ಪರ್ಶಿಯಾ) ಇವುಗಳೊಳಗೆ ವ್ಯಾಪಾರ ಸಂಬಂಧವೂ ಜ್ಞಾನದ ಬಿತ್ತರಿಕೆಯೂ ವಿಶೇಷವಾಗಿದ್ದುದರಿಂದ ಒಂದೇ ವೃಕ್ಷದ ಎರಡು ಶಾಖೆಗಳೆಂದು ಈ ಎರಡು ಸಂಸ್ಕೃತಿಗಳನ್ನು ಗಣಿಸಿದರೂ ತಪ್ಪಾಗದು. ಆರ್ಯಕುಲದ ಒಂದು ಶಾಖೆಯು ಇರಾನಿ ನಲ್ಲಿ ನೆಲೆಸಿ ಬೆಳೆದು ಬಂದಿರಬೇಕು, ಇಲ್ಲವೆ ಭಾರತದ ಆರ್ಯರಲ್ಲೇ ಒಡಕು ಉಂಟಾಗಿ ಒಂದು ಶಾಖೆಯವರು ಇರಾನಿಗೆ ಹೋಗಿರಬೇಕು. ವಿಚಿತ್ರದ ಸಂಗತಿಯೆಂದರೆ ಆರ್ಯರು ಪೂಜನೀಯ ಅತಿಮಾನುಷಶಕ್ತಿ ಗಳನ್ನು ದೇವತೆಗಳೆಂದೂ ದೇವತೆಗಳ ವಿರೋಧಿಗಳನ್ನು ಅಸುರರೆಂದೂ ಕರೆಯುತ್ತಿದ್ದರೆ ಇರಾನಿನವರು ಪೂಜನೀಯ ಶಕ್ತಿಗಳನ್ನು ಅಹುರರೆಂದು ಕರೆಯುತ್ತಿದ್ದರು. ಇರಾನಿನ ದೇವಶ್ರೇಷ್ಠನು ಅಹುರ ಮಾಜ್ದಾ. ಇರಾನಿ ನವರಲ್ಲಿಯೂ ಸೂರ್ಯಪೂಜೆ, ಅಗ್ನಿಪೂಜೆಗಳಿದ್ದುವು, ಮೌಂಜೀ ಬಂಧ



ಈಶ್ವರಪುರದ ದೇವಾಲಯುಗಳ ಗೋಡೆಗಳ ಮೇಲೆ
ಈ ರೀತಿಯ ಕೆತ್ತನೆಕೆಲಸಗಳನ್ನು ಕಾಣಬಹುದು.



ಇಂಡೋಚೀನಾದ ಲಿಂಗಪರ್ವತದಲ್ಲಿನ ಒಂದು ದೇವಸ್ಥಾನ.

ನವೂ ಇತ್ತು. ದಾರಯುಸನೆಂಬ ಇರಾನಿನ ಚಕ್ರವರ್ತಿಯ ಕಾಲದಲ್ಲಿ ಪಂಜಾಬಿನ ಒಂದು ಭಾಗವು ಅವನ ರಾಜ್ಯಕ್ಕೆ ಸೇರಿದ್ದು ಇರಾನಿನ ಕ್ಷತ್ರಪನೊಬ್ಬನು ಅದನ್ನು ಆಳುತ್ತಿದ್ದನು. ಅಶೋಕನ ಸ್ತಂಭಗಳಿಗೂ ಇರಾನಿನ ಚಕ್ರವರ್ತಿಗಳು ಸ್ಥಾಪಿಸಿದ ಸ್ತಂಭಗಳಿಗೂ ಹೋಲಿಕೆಯಿದೆ. ಅಶೋಕನ ಕಾಲದ ವರೆಗೆ ಮರದಿಂದಲೇ ಅರಮನೆಗಳನ್ನೂ ಮಂದಿರ ಗಳನ್ನೂ ಕಟ್ಟುತ್ತಿದ್ದ ಭಾರತೀಯರಲ್ಲಿ ಕಲ್ಲಿನ ಕೆಲಸ ಮಾಡಬೇಕೆಂಬ ಯೋಜನೆ ಇರಾನಿನ ಮಾದರಿಯಿಂದ ಬಂದಿರಬೇಕು.

ಪರಧರ್ಮ, ಪರಕೀಯ ಸಂಸ್ಕೃತಿಗಳಿಗೆ ಇರಾನು ಏಳನೇ ಶತ ಮಾನದಲ್ಲಿ ಬಲಿಬೀಳುವ ಕಾಲದಲ್ಲಿ ಅಲ್ಲಿಂದ ಸಾವಿರಾರು ಮಂದಿ ಗುಜ ರಾತಿಗೆ ಬಂದು ಆಶ್ರಯವನ್ನು ಪಡೆದರು. ಅವರಾಗಿ ತಮ್ಮ ನೆರೆಕರೆ ಯವರ ಸ್ನೇಹ ಸಂಪರ್ಕದಿಂದ ಗೋಮಾಂಸ ಭಕ್ಷಣೆಯನ್ನು ಬಿಟ್ಟು, ಕ್ರಮೇಣ ಗುಜರಾತಿ ಭಾಷೆಯನ್ನಾಡಲಿಕ್ಕಾರಂಭಿಸಿ ಭಾರತದ ಜನತೆ ಯೊಡನೆ ಬೆರೆತಿದ್ದರೂ ಮತಾಚಾರಗಳಲ್ಲಿ, ವಿವಾಹಾದಿಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ಇಟ್ಟುಕೊಂಡಿದ್ದಾರೆ; ಇತರರು ಅವರನ್ನು ಒತ್ತಾಯಿಸಿದ್ದೂ ಇಲ್ಲ.

ಪಾಶ್ಚಾತ್ಯ ಸಂಸ್ಕೃತಿಯ ತವರುಮನೆಯೆಂದರೆ ಪ್ರಾಚೀನ ಗ್ರೀಸು. ಗ್ರೀಕರು ಪೂಜಿಸುತ್ತಿದ್ದ ದೇವದೇವತೆಗಳಿಗೂ ವೇದಗಳಲ್ಲಿ ಉಲ್ಲೇಖಿಸ ಲ್ಪಟ್ಟ ದೇವದೇವತೆಗಳಿಗೂ ಸಾಮ್ಯವಿದೆ, ಗ್ರೀಕರ ಭಾಷೆಯನ್ನು ಆರ್ಯ ಭಾಷೆಯ ಒಂದು ಶಾಖೆಯೆಂದೂ ಹೇಳಬಹುದು. ಗ್ರೀಕರ ವಿಚಾರ ಪರತೆ, ಅನ್ವೇಷಣೆ, ವಿಜ್ಞಾನದೃಷ್ಟಿಗಳು ನೀಲನದೀಮುಖದಲ್ಲಿರುವ ಅಲೆಕ್ಸಾಂಡ್ರಿಯಾದಲ್ಲಿದ್ದ ಗ್ರೀಕರ ನೆಲೆವೀಡಿನಲ್ಲಿ ಹುಲುಸಾಗಿ ಬೆಳೆದುವು. ಆ ಕಾಲದಲ್ಲಿ (ಕ್ರಿ. ಪೂ. 2ನೇ 3ನೇ ಶತಮಾನ) ಭಾರತಕ್ಕೆ ಅಲೆಕ್ಸಾಂ ಡ್ರಿಯಾದವರೊಡನೆ ಸಂಪರ್ಕವಿತ್ತು. ಅಲೆಕ್ಸಾಂಡ್ರಿಯಾದಿಂದ ಹೊರಟ ಗ್ರೀಕರು ಹಡಗುಗಳಲ್ಲಿ ಭರುಕಚ್ಛಕ್ಕೆ ಬರುತ್ತಿದ್ದರು; ಇಲ್ಲಿಂದ ವಸ್ತ್ರಾದಿ ಗಳನ್ನು ಕೊಂಡುಕೊಂಡು ತಮ್ಮ ದೇಶದ ದ್ರಾಕ್ಷಾಮದ್ಯ, ಅಂಜೂರ ಮೊದಲಾದುವನ್ನೂ ಕುದುರೆಗಳನ್ನೂ ಮಾರುತ್ತಿದ್ದರು. ಮೌರ್ಯರ

ಆಸ್ಥಾನದಲ್ಲಿದ್ದ ಸೇವಕರಲ್ಲಿ ಯವನ ಯುವಕ ಯುವತಿಯರೂ ಇದ್ದರಂತೆ. ಭಾರತದ ಉಜ್ಜಯಿನೀ ನಗರದ ವೇಧಶಾಲೆಯವರಿಗೂ ಅಲೆಕ್ಸಾಂಡ್ರಿಯದ ವೇಧಶಾಲೆಗಳವರಿಗೂ ಪತ್ರವ್ಯವಹಾರ ನಡೆಯುತ್ತಿತ್ತು. ಹೀಗಾಗಿ ಗ್ರೀಕರ ರೀತಿಯ ಕಾಲಗಣನೆಯು ಭಾರತೀಯರ ಕಾಲಗಣನೆಯೊಂದಿಗೆ ಮಿಲನ ವಾಗಿದೆ. ಗ್ರೀಕ್ ತತ್ವಜ್ಞಾನಿಗಳಲ್ಲಿ ಹೆಸರಾಂತ ಪಾಯ್ತಗೊರಿಸನ ಮೇಲೂ ಪ್ಲೇಟೋವಿನ ಮೇಲೂ ಭಾರತೀಯ ದಾರ್ಶನಿಕರ ಮತ್ತು ನೀತಿಶಾಸ್ತ್ರ ಜ್ಞರ ಪ್ರಭಾವ ಬಿದ್ದಿದೆಯೆಂದು ತಜ್ಞರು ಅಭಿಪ್ರಾಯ ಪಡುತ್ತಾರೆ.

ಗ್ರೀಕರ ಇನ್ನೊಂದು ನೆಲೆವೀಡಾಗಿದ್ದ ಬಕ್ಟೇರಿಯಾ (ಅಫ್ಘಾನಿಸ್ಥಾನದ ಆಚೆ) ದಿಂದಲೂ ಭಾರತ–ಗ್ರೀಸುಗಳ ಸಂಬಂಧ ಬೆಳೆದು ಬಂದಿತ್ತು. ಕಣಿಷ್ಕನ ಕಾಲದಲ್ಲಿ ಗ್ರೀಕ್ ಶಿಲ್ಪಿಗಳು ಬುದ್ಧನ ಮೂರ್ತಿಗಳನ್ನು ಕೆತ್ತ ಲಿಕ್ಕಾರಂಭಿಸಿದರೆಂದೂ ಅವರ ಕೆತ್ತನೆಯ ರೀತಿಗೆ ಗಾಂಧಾರ ಸಂಪ್ರದಾಯ ವೆಂದೂ ಹೇಳುವುದಿದೆ. ಅಲ್ಲಿಂದ ಮತ್ತೆ ಮೂರ್ತಿನಿರ್ಮಾಣ ಭಾರತ ದಲ್ಲೆಲ್ಲ ಪ್ರಸರಿಸಿತು. ಬೌದ್ಧರಲ್ಲಿ ಮಾತ್ರವಲ್ಲ, ಹಿಂದುಗಳಲ್ಲಿ ಸಹ ಸುಂದರವಾದ ವಿಗ್ರಹಗಳನ್ನು ಕೆತ್ತುವ ಇಲ್ಲವೆ ಎರಕಹೊಯ್ಯುವ ಕೆಲಸವು ಉತ್ತಮ ಕಲೆಯಾಗಿ ಬೆಳೆಯಿತು.

ಭಾರತ ಗ್ರೀಸುಗಳೊಳಗಿನ ಸಂಬಂಧವನ್ನು ತಿಳಿಯಲು ಸ್ವಲ್ಪ ಶ್ರಮವಿದೆ. ಭಾರತ ಚೀನಾಗಳ ಮೈತ್ರಿಯು ಸರ್ವವಿದಿತ. ಭಾರತದಿಂದ ಚೀನಾದೇಶಕ್ಕೆ ಹೋಗಲಿಕ್ಕೆ ಹತ್ತಿರದ ದಾರಿ ಟಿಬೇಟಿನಿಂದಿದ್ದರೂ ಕಷ್ಟ ಸಾಧ್ಯದ ಹಾದಿಯದು. ಆದರೂ ಆ ಮಾರ್ಗದಿಂದ ಚೀನಾದೇಶದ ಜನರು ಇಲ್ಲಿಗೂ ಇಲ್ಲಿಂದಲ್ಲಿಗೂ ಹೋಗಿಬರುತ್ತಿರಬೇಕು. ಇಲ್ಲದಿದ್ದರೆ ನೇಪಾಳ, ಆಸಾಮು (ಕಾಮರೂಪ) ಗಳಲ್ಲಿನ ಜನರಲ್ಲಿ ವಿಶೇಷ ವಾಗಿಯೂ ಬಂಗಾಳದಲ್ಲಿ ಸ್ವಲ್ಪಮಟ್ಟಿಗೂ ಚೀನಾದೇಶದವರ ಮುಖ ಛಾಯೆ ಕಂಡುಬರುವುದು ಹೇಗೆ?

ಪ್ರಾಚೀನ ಕಾಲದಲ್ಲಿ ಭಾರತೀಯರೂ ಚೀನಾದವರೂ ಉಪಯೋ ಗಿಸುತ್ತಿದ್ದ ದಾರಿ ಟಿಬೇಟಿನಿಂದಿರದೆ ಮಧ್ಯ ಆಶ್ಯದಿಂದ ಹಾದು ಹೋಗು ತ್ತಿತ್ತು. ಈಗ ಮರುಭೂಮಿಯಾಗಿರುವ ಪ್ರದೇಶಗಳಲ್ಲಿ ಆ ಕಾಲದಲ್ಲಿ

ಜನವಾಸವಿದ್ದಿತ್ತಾದರೂ ದಾರಿಯಲ್ಲಿ ಮರುಭೂಮಿಯ ಅಂಶವೂ ಸಿಕ್ಕುತ್ತಿತ್ತು. ಆದರೆ ಪ್ರಯಾಣದ ಎಡರುತೊಡರುಗಳನ್ನು ಗಣಿಸದೆ ಅಶೋಕನ ಕಾಲದಲ್ಲಿ ಬುದ್ಧಭಿಕ್ಷುಗಳು ಪರದೇಶಗಳಿಗೆ ಹೋಗಲಿಕ್ಕಾರಂಭ ಮಾಡಿ ಸುಮಾರು ಒಂದು ಸಾವಿರ ವರ್ಷಕಾಲ ಭಾರತದ ವಿಕಾಸವು ವಿಸ್ತೃತವಾಗುತ್ತ ಬಂದಿತು. ಕಣಿಷ್ಕನ ಪ್ರೋತ್ಸಾಹದಿಂದಂತೂ ಚೀನಾ–ಭಾರತಗಳು ನೆರೆಮನೆಗಳಾದುವು.

ಕ್ರಿ. ಶ. 67ರಲ್ಲಿ ಕಾಶ್ಯಪ ಮಾತಂಗನೆಂಬ ವಿದ್ವಾಂಸನು ಚೀನಾ ದೇಶಕ್ಕೆ ಬಂದನೆಂದೂ ಅಂದಿನಿಂದ ಅನೇಕ ಮಂದಿ ಭಾರತೀಯರು ಅಲ್ಲಿಗೆ ಪ್ರಯಾಣಿಸಿ ಕ್ರಿ. ಶ. 6ನೇ ಶತಮಾನವಾಗುವಾಗ 10,000 ಭಾರತೀಯ ಕುಟುಂಬಗಳು ಚೀನಾದಲ್ಲಿದ್ದುವೆಂದೂ ಚೀನಾದೇಶದವರ ಬರೆಹಗಳಿಂದ ತಿಳಿದುಬಂದಿದೆ. ಇಲ್ಲಿಂದ ಹೋದ ವಿದ್ವಾಂಸರು ಸಂಸ್ಕೃತ ಗ್ರಂಥಗಳನ್ನು ಚೀನಾ ಭಾಷೆಗೆ ಪರಿವರ್ತಿಸಿದ್ದಲ್ಲದೆ ಚೀನಾ ಭಾಷೆಯಲ್ಲಿ ಸ್ವಂತ ಕಾವ್ಯಗಳನ್ನೂ ರಚಿಸಿದ್ದರು. ಚೀನೀಯರು ಪುಸ್ತಕಗಳನ್ನು ಅಚ್ಚುಹಾಕುವುದಕ್ಕಾರಂಭಿಸಿದಾಗ ಅಚ್ಚುಹಾಕಿದ ಪುಸ್ತಕಗಳಲ್ಲಿ ಸಂಸ್ಕೃತ ಪುಸ್ತಕಗಳೂ ಇವೆ.

ಇಲ್ಲಿಂದ ವಿದ್ವಾಂಸರು ಚೀನಾದೇಶಕ್ಕೆ ಹೋಗುತ್ತಿದ್ದಂತೆ ಚೀನಾದಿಂದ ಇಲ್ಲಿಗೂ ಬರುತ್ತಿದ್ದರು. ಬಂದವರಲ್ಲಿ ಪ್ರಖ್ಯಾತನಾದ ಫಾಹಿಯಾನನು ಕಿ. ಶ. ಐದನೇ ಶತಮಾನದಲ್ಲಿ ಬಂದು ಪಾಟಲೀಪುತ್ರದಲ್ಲಿನ ವಿಶ್ವವಿದ್ಯಾಲಯದಲ್ಲಿ ವಾಸಿಸಿ ತನ್ನ ವಿದ್ಯಾಭ್ಯಾಸದ ಪರಿಪೂರ್ಣತೆಯನ್ನು ಪಡೆದನು. ಹರ್ಷ ಪುಲಿಕೇಶಿಯರ ಕಾಲದಲ್ಲಿ ಬಂದ ಯುವಾನ್ ಚ್ವಾಂಗನ ಬರೆಹಗಳಿಂದ ಭಾರತೀಯರ ವಿಷಯವಾಗಿ ಅನೇಕ ಸಂಗತಿಗಳನ್ನು ತಿಳಿಯಬಹುದು. ಪಾಟಲೀಪುತ್ರದ ಸಮೀಪದಲ್ಲಿದ್ದ ನಾಲಂದ ವಿಶ್ವವಿದ್ಯಾಲಯದಲ್ಲಿ 10,000 ವಿದ್ಯಾರ್ಥಿಗಳಿದ್ದರೆಂದೂ ವ್ಯಾಕರಣ, ಕಲೆ ವೈದ್ಯ, ತರ್ಕ, ತತ್ವಜ್ಞಾನಗಳನ್ನು ಪಠಿಸುತ್ತಿದ್ದರೆಂದೂ ಯುವಾನ್ ಚ್ವಾಂಗನು ಬರೆದಿದ್ದಾನೆ. ಭಾರತದ ಜನರ ಕುರಿತು ಅವನ ಮಾತುಗಳು ಹೀಗಿವೆ—“ಸತ್ಯವಂತರು, ನಂಬಿಗಸ್ತರು. ನ್ಯಾಯಪಾಲನೆಯಲ್ಲಿ

ದಯೆಯಿದೆ . . . ಕಳವು, ದರೋಡೆಗಳು ಅಪರೂಪ . . . ಆಡಳಿತೆಯು ಜನರ ಹಿತಕ್ಕಾಗಿದೆ. . . ವ್ಯಾಪಾರಾದಿಗಳು ಅಡ್ಡಿಯಿಲ್ಲದೆ ನಡೆಯುತ್ತಿವೆ".

ಯುವಾನ್ ಚ್ವಾಂಗನು ಸ್ವದೇಶಕ್ಕೆ ಹಿಂತೆರಳಿದ ಅನಂತರವೂ ಇಲ್ಲಿನ ವಿದ್ವಾಂಸರೊಡನೆ ಪತ್ರವ್ಯವಹಾರ ಬೆಳೆಸಿದ್ದನೆಂದು ತಿಳಿದುಬಂದಿದೆ. ಅವನಿಂದ ಹರ್ಷಸಾಮ್ರಾಜ್ಯದ ಉನ್ನತಿಯನ್ನು ಕೇಳಿ ಚೀನಾದೇಶದ ಅರಸನು ಹರ್ಷನಲ್ಲಿಗೆ ರಾಯಭಾರಿಯನ್ನು ಕಳುಹಿಸಿದ್ದನು.

ಕ್ರಿ. ಶ. ಏಳನೇ ಶತಮಾನದಲ್ಲಿ ಯಿ–ತ್ಸಿಂಗನೆಂಬ ಯಾತ್ರಿಕನು ಭೂಮಾರ್ಗದಿಂದ ಬಂದು ಹಿಂದೆ ಹೋಗುವಾಗ ಜಲಮಾರ್ಗವಾಗಿ ಬರ್ಮಾ, ಮಲಯಾ, ಇಂಡೋ ಚೀನಾಗಳನ್ನು ಸುತ್ತಿಕೊಂಡು ಹೋಗಿ ದಾರಿಯುದ್ದಕ್ಕೂ ಭಾರತೀಯ ನಿವಾಸಿಗಳನ್ನು ಕಂಡಿದ್ದನು. ಉತ್ತರ ಭಾರತದವರು ಗೋಧಿಯನ್ನೂ ದಕ್ಷಿಣದವರು ಅಕ್ಕಿಯನ್ನೂ ಉಪಯೋಗಿಸುತ್ತಾರೆಂದೂ, ಹಾಲು, ಮೊಸರು, ತುಪ್ಪ, ಎಣ್ಣೆಗಳು ಎಲ್ಲೆಲ್ಲಿಯೂ ಇವೆಯೆಂದೂ ಮಾಂಸಾಹಾರವು ಕಡಿಮೆಯೆಂದೂ ಅವನ ಹೇಳಿಕೆ.

ಭಾರತದಲ್ಲಿ ಬೌದ್ಧಮತವು ಖಿಲವಾಗುತ್ತ ಬಂದಾಗ ಯಾತ್ರಿಕರ ಸಂಖ್ಯೆಯೂ ಕಡಿಮೆಯಾಯಿತು. ಹನ್ನೊಂದನೇ ಶತಮಾನದಲ್ಲಿ ಬೌದ್ಧ ವಿಹಾರಗಳು ವೈರಿವಶವಾಗುತ್ತಿದ್ದ ಕಾಲದಲ್ಲಿ ಅನೇಕ ಮಂದಿ ವಿದ್ವಾಂಸರು ಗ್ರಂಥರಾಶಿಯನ್ನು ಕಟ್ಟಿಕೊಂಡು ಟಿಬೇಟಿಗೂ ಚೀನಾದೇಶಕ್ಕೂ ಹೋದರು. ಈಗಲೂ ಅನೇಕ ಪ್ರಾಚೀನ ಬೌದ್ಧಗ್ರಂಥಗಳ ಮೂಲಪ್ರತಿಗಳು ಟಿಬೇಟಿನಲ್ಲಿವೆ.

ಇಜಿಪ್ತಿನ ಕಾಯ್ರೋವಿನೊಂದಿಗೆ ಸಂಪರ್ಕವಿದ್ದ ಭಾರತೀಯರಿಗೆ ಸಹಜವಾಗಿ ಅರಬಸ್ತಾನದೊಡನೆ ವ್ಯವಹಾರವೂ ಇತ್ತು. ಕ್ರಿ. ಶ. ಏಳನೇ ಶತಮಾನದಲ್ಲಿ ಇಸ್ಲಾಂ ಧರ್ಮದಿಂದಾಗಿ ಅರಬರಲ್ಲಿ ಐಕ್ಯವೂ ನವಜೀವನವೂ ತುಂಬಿದಾಗ ಅರಬಸ್ತಾನದ ಅರಸರು ಈ ಕಡೆ ಇರಾನಿನಲ್ಲೂ ಆ ಕಡೆ ಇಜಿಪ್ತು, ಸಿರಿಯಾ, ಪಲೆಸ್ತೀನುಗಳಲ್ಲಿ ಮಾತ್ರವಲ್ಲದೆ ಯುರೋಪಿನ ಸ್ಪೈನಿನಲ್ಲೂ ತಮ್ಮ ರಾಜ್ಯವನ್ನು ಸ್ಥಾಪಿಸಿದರು. ಭಾರತದ ಸಿಂಧೂಪ್ರದೇಶದಲ್ಲಿ ಸ್ಥಾಪಿತವಾದ ಅರಬ ರಾಜ್ಯವು ವಿಸ್ತೃತವಾಗಲಿಲ್ಲ.

ಆದರೆ ಈ ಎರಡು ದೇಶಗಳೊಳಗೆ ವ್ಯಾಪಾರವು ನಡೆಯುತ್ತಲೇ ಇತ್ತು. ಅರಬರು ಪಶ್ಚಿಮ ಕರಾವಳಿಯ ಬಂದರುಗಳೊಡನೆ ವ್ಯಾಪಾರ ಮಾಡುತ್ತಿದ್ದರು, ಕೆಲವರು ಅಲ್ಲಲ್ಲಿ ಮನೆ ಮಾಡಿ ಮಸೀದಿಗಳನ್ನು ಕಟ್ಟಿದ್ದರು. ಮಲಬಾರಿನಲ್ಲಿ ನೆಲೆನಿಂತ ಅರಬರ ಮತ್ತು ಅಲ್ಲಿಯ ಭಾರತೀಯರ ಸಂಪರ್ಕದಿಂದಲೇ ಮಾಪಿಳ್ಳೆಯವರೆಂಬ ಹೊಸತೊಂದು ಜಾತಿಯುಂಟಾಯಿತೆಂದು ಹೇಳುತ್ತಾರೆ. ಹೀಗೆ ಭಾರತದಲ್ಲಿ ಇಸ್ಲಾಂ ಧರ್ಮಕ್ಕೆ ಆಶ್ರಯ ಘಜನಿ ಮಹಮ್ಮದನ ಕಾಲದ ಮೊದಲೇ ಇತ್ತು.

ಬಾಗ್ದಾದು ನಗರವು ಅರಬರ ರಾಜಧಾನಿಯಾಗಿದ್ದಾಗ ಹಾರೂನ್ ಅಲ್ ರಶೀದ್ ಎಂಬ ಖಲೀಫನ ಆಳ್ವಿಕೆಯಲ್ಲಿ ಘನತೆಯ ಶಿಖರವನ್ನು ಮುಟ್ಟಿತ್ತು. ಆ ಸಮಯದಲ್ಲಿ ಭಾರತದ ಗಣಿತಜ್ಞರೂ ಜ್ಯೋತಿಷಿಗಳೂ ವೈದ್ಯರೂ ಅಲ್ಲಿ ಸಹ ವಾಸಿಸುತ್ತಿದ್ದರೆಂದೂ ಗೊತ್ತಾಗಿದೆ. ಭಾರತದ ಗಣಿತ, ಜ್ಯೋತಿಷ, ವೈದ್ಯಗಳನ್ನು ಅರಬರು ಪಡೆದು ಅಲ್ಲಿಂದ ಮತ್ತೆ ಅವರ ಮೂಲಕವೇ ಯುರೋಪಿನ ದೇಶಗಳಿಗೆ ಆ ಜ್ಞಾನವು ಒಯ್ಯಲ್ಪಟ್ಟಿತು. ಸ್ಪೈಯ್ನಿನಲ್ಲಿ ಅರಬರ ವಿಶ್ವವಿದ್ಯಾಲಯಗಳಿದ್ದು ಅನೇಕ ಮಂದಿ ವಿದ್ವಾಂಸರೂ ಅಲ್ಲಿ ವಾಸಿಸುತ್ತಿದ್ದರು.

ಸಿಂಹಳದ್ವೀಪದ ಕುರಿತು ಬೇರೆಯೇ ವಿವರಿಸುವ ಅಗತ್ಯವಿಲ್ಲ. ರಾವಣನ ರಾಜ್ಯವಾಗಿತ್ತೆಂದೂ ಸಿಂಹಳ ಭಾರತಗಳ ನಡುವಿರುವ ನಡುಗುಡ್ಡೆಗಳು ರಾಮನ ಸೇತುವಿನ ಅವಶೇಷಗಳೆಂದೂ ನಂಬಿಗೆಯಿದೆಯಷ್ಟೆ. ಅಶೋಕನ ಕಾಲದಲ್ಲಿ ಅವನ ಮಗನೇ ಸಿಂಹಳಕ್ಕೆ ಬೌದ್ಧಧರ್ಮ ಪ್ರಚಾರಕ್ಕೆ ಹೋಗಿದ್ದನೆಂದು ಪ್ರತೀತಿಯಿದೆ. ಪ್ರಬಲರಾದ ತಮಿಳು ಅರಸರು ಸಿಂಹಳದ ಮೇಲೂ ತಮ್ಮ ಅಧಿಕಾರ ನಡೆಸುತ್ತಿದ್ದರು. ಈಗಲೂ ಸಿಂಹಳದ ಉತ್ತರ ಭಾಗದಲ್ಲಿ ತಮಿಳರಿರುವರು. ಆ ದ್ವೀಪದ ಜನರಲ್ಲಿ ಬಹುಮಂದಿ ಇನ್ನೂ ಬೌದ್ಧರಾಗಿಯೇ ಉಳಿದಿದ್ದಾರೆ.

ಪರದೇಶಗಳ ನಾವಿಕರೇ ಇಲ್ಲಿಗೆ ಬರಬೇಕೆಂದು ಭಾರತೀಯರು ಸುಮ್ಮನಿರಲಿಲ್ಲ. ಉತ್ತಮ ನಾವಿಕರಿಂದ ನಡೆಸಲ್ಪಟ್ಟ ತಮ್ಮದೇ ನಾವೆಗಳಲ್ಲಿ ಸಾಗರಗಳನ್ನು ದಾಟಿ ದೂರದೂರದ ದೇಶಗಳೊಡನೆ ವ್ಯಾಪಾರ ಮಾಡುತ್ತಿದ್ದರು; ಪರದೇಶಗಳಲ್ಲಿ ನೆಲೆನಿಂತು ಕಟ್ಟಡಗಳನ್ನೂ ಕಟ್ಟಿದ್ದರು;

ಸಮುದ್ರ ಪ್ರಯಾಣದ ಭೀತಿಯಾಗಲಿ ಸಾಗರವನ್ನು ದಾಟಿದರೆ ಜಾತಿ ಭ್ರಷ್ಟರಾಗುವೆವೆಂಬ ಭಾವನೆಯಾಗಲೀ ಆಗಿನವರಿಗಿರಲಿಲ್ಲ. ಕ್ರಿ. ಶ. ಒಂದನೇ ಶತಮಾನದಿಂದಲೇ ಪಶ್ಚಿಮ ಭಾಗದ ಕಚ್ಛ್‌ದಿಂದಲೂ ಪೂರ್ವ ಕರಾವಳಿಯ ಕಳಿಂಗದಿಂದಲೂ ದಕ್ಷಿಣದ ತಮಿಳು ನಾಡಿನಿಂದಲೂ ನಾವಿಕರೂ ಯೋಧರೂ ವರ್ತಕರೂ ಧರ್ಮಬೋಧಕರೂ ಪೂರ್ವ ಮತ್ತು ಆಗ್ನೇಯ ದೇಶಗಳಿಗೆ ಹೋಗಲಾರಂಭಿಸಿದ್ದರು.

ಆರಂಭದಲ್ಲಿ ಕಡಲ ದಡದ ಹತ್ತಿರದಲ್ಲೇ ಹಡಗುಗಳನ್ನು ನಡೆಸಿ ಬರ್ಮಾ, ಮಲಯಾ, ಸುಮಾತ್ರಾ, ಜಾವಾಗಳಿಗೆ ಹೋಗಲಾರಂಭಿಸಿ ಕಡೆಕಡೆಗೆ ನೇರಾಗಿ ಸಾಗರವನ್ನು ದಾಟಿ ಹೋಗುತ್ತಿದ್ದರು. ನಾವಿಕರಾಗಿ ಕೀರ್ತಿ ಪಡೆಯಬೇಕಾದರೆ ಉತ್ತಮವಾದ ಹಡಗುಗಳನ್ನು ಕಟ್ಟಲಿಕ್ಕೆ ಗೊತ್ತಿರಬೇಕು. ಆ ಕಾಲದಲ್ಲಿ ಭಾರತೀಯರು ನೌಕಾ ರಚನೆಯಲ್ಲಿ ಪಡೆದ ಪ್ರಾವೀಣ್ಯ ಈಸ್ಟ್ ಇಂಡಿಯಾ ಕಂಪೆನಿಯ ಕಾಲದ ವರೆಗೂ ಬಾಳಿಬಂದಿತ್ತು. ಇಂಗ್ಲಿಷು ವರ್ತಕರು ತಮಗೆ ಬೇಕಾಗಿದ್ದ ಹಡಗುಗಳನ್ನು ಇಲ್ಲಿ ಕಟ್ಟಿಸುತ್ತಿದ್ದರು. ಉಗಿಹಡಗುಗಳ ನಿರ್ಮಾಣವಾದ ಮೇಲೆ ಭಾರತದ ನೌಕಾ ನಿರ್ಮಾಣದ ಕೆಲಸ ಹಿಂದೆ ಬಿತ್ತು.

ಬೃಹದ್ಭಾರತದ ಪೂರ್ವ ದಿಕ್ಕಿನ ರಾಷ್ಟ್ರಗಳಲ್ಲಿ ಮಲಯಾ, ಜಾವಾ, ಸುಮಾತ್ರಾ, ಬಾಲಿಗಳನ್ನಾಳಿದ ಶೈಲೇಂದ್ರರ ರಾಜ್ಯವು ವಿಶೇಷ ಪ್ರಾಬಲ್ಯವನ್ನು ಹೊಂದಿತ್ತು. ವೈಭವದ ಶಿಖರದಲ್ಲಿದ್ದಾಗ ಅಲ್ಲಿನ ರಾಜರು ಸಿಂಹಳ, ಮಲಯ, ಜಾವಾ ಮತ್ತು ಹತ್ತಿರದ ದ್ವೀಪಗಳನ್ನಲ್ಲದೆ ಫಿಲಿಪ್ಪೈನ ದ್ವೀಪಗಳನ್ನೂ ಆಳುತ್ತಿದ್ದರು. ಶೈಲೇಂದ್ರ ಅರಸರನ್ನು ಚೋಳರು ಸೋಲಿಸಿ ಐವತ್ತು-ಅರುವತ್ತು ವರ್ಷಗಳ ಕಾಲ ಜಾವಾ ಮೊದಲಾದ ದ್ವೀಪಗಳನ್ನಾಳಿದರೆಂದೂ ಗೊತ್ತಾಗಿದೆ. ಅನಂತರ ಅಲ್ಲಲ್ಲಿ ಚಿಕ್ಕಚಿಕ್ಕ ರಾಜ್ಯಗಳಾಗಿ ಹತ್ತನೇ ಶತಮಾನದಲ್ಲಿ ಸುಮಾತ್ರಾ ಜಾವಾಗಳು ಇಸ್ಲಾಂ ಧರ್ಮದ ರಾಜರ ವಶವಾದುವು.

ಈಗಲೂ ಆ ಪ್ರದೇಶಗಳಲ್ಲಿ ಭಾರತೀಯ ಸಂಸ್ಕೃತಿಯ ಹೆಜ್ಜೆಗಳನ್ನು ಕಾಣಬಹುದು. ಮಲಯ, ಸಿಂಹಪುರ (ಸಿಂಗಾಪುರ), ಜವದ್ವೀಪ (ಜಾವಾ), ಬಾಲಿ ದ್ವೀಪ—ಇವೆಲ್ಲ ಭಾರತೀಯರಿಟ್ಟ ಹೆಸರುಗಳು.

ದ್ವೀಪಗಳ ಜನರು ಮುಸ್ಲಿಮರಾದರೂ ಮನೆತನದ ಹೆಸರುಗಳಲ್ಲಿ ಕರ್ಣ, ಬಾಲಿ ಮೊದಲಾದುವು ಉಳಿದಿವೆ. ಜಾವಾ ದ್ವೀಪದ ಬೊರೊಬದರ ಎಂಬಲ್ಲಿ ಪ್ರಾಚೀನ ದೇವಸ್ಥಾನದ ಅವಶೇಷಗಳು ಈಗಲೂ ಉಳಿದಿವೆ. ಅಷ್ಟು ದೊಡ್ಡ ದೇವಸ್ಥಾನವನ್ನು ಕಾಣುವುದು ಅಪರೂಪವಂತೆ. ದೇವಾಲಯದ ಪ್ರಾಕಾರದ ಶಿಲಾಸ್ತಂಭಗಳಲ್ಲೂ ಗೋಡೆಗಳಲ್ಲೂ ರಾಮಾಯಣ ಮಹಾಭಾರತ, ಬುದ್ಧ ಜಾತಕದ ಕತೆಗಳನ್ನು ಚಿತ್ರಿಸುವ ಶಿಲ್ಪಗಳಿವೆ. ಬಾಲಿ ದ್ವೀಪದ ಜನರು ಈಗಲೂ ಒಂದು ರೀತಿಯ ಹಿಂದೂಧರ್ಮವನ್ನು ಪಾಲಿಸಿ ರಾಮಾಯಣಾದಿಗಳ ಪಠನ ಮಾಡುತ್ತಾರೆ. ಅವರ ರಾಮಾಯಣದ ಕತೆ ನಮ್ಮಲ್ಲಿನ ಕತೆಯಂತಿರದೆ ಸ್ವಲ್ಪ ವ್ಯತ್ಯಾಸವನ್ನು ಹೊಂದಿದೆ. ದ್ವೀಪವಾಸಿಗಳ ನೃತ್ಯ, ಛಾಯಾ ನಾಟಕಗಳಲ್ಲಿ ಇಲ್ಲಿನ ಪುರಾಣಗಳ ಕಥಾವಸ್ತುಗಳೇ ಕಂಡುಬರುತ್ತವೆ.

ಬರ್ಮಾ ದೇಶವನ್ನು ಪ್ರಾಚೀನ ಭಾರತೀಯರು ಸ್ವರ್ಣಭೂಮಿಯೆಂದು ಕರೆಯುತ್ತಿದ್ದರು. ಬರ್ಮಾದೇಶದಲ್ಲಿ ಈಗಲೂ ಬೌದ್ಧಧರ್ಮವು ಪ್ರಚಾರದಲ್ಲಿರುವುದರಿಂದ ಭಾರತದೊಡನೆ ಸಂಪರ್ಕವಿತ್ತೆಂದು ಬೇರೆ ವಿವರಿಸುವ ಅಗತ್ಯವಿಲ್ಲ.

ಬರ್ಮಾದೇಶದ ನೆರೆಕರೆಯಲ್ಲಿರುವ ಸಯಾಮಿನಲ್ಲೂ ಭಾರತೀಯರು ಹೋಗಿ ಇಲ್ಲಿನ ಭಾಷೆ, ಮತ, ಕಲೆಗಳನ್ನು ಅಲ್ಲಿನವರಿಗೆ ಕಲಿಸಿದ್ದರು. ಈಗಲೂ ಅಲ್ಲಿನ ರಾಜಪುರೋಹಿತರ ಆಚಾರಗಳಲ್ಲಿ ಬ್ರಾಹ್ಮಣರ ಆಚಾರಗಳ ಪ್ರಭಾವವನ್ನೂ ರಾಜ್ಯಾಭಿಷೇಕದ ಕ್ರಮದಲ್ಲಿ ಭಾರತದ ಪದ್ಧತಿಯನ್ನೂ ಜನರ ಹೆಸರುಗಳಲ್ಲಿ ಸಹ ಸಂಸ್ಕೃತ ಪದಗಳನ್ನೂ ಕಾಣಬಹುದು.

ಸಯಾಮನ್ನು ದಾಟಿ ಮುಂದೆ ಹೋದರೆ ಇಂಡೋಚೀನಾ ಎನ್ನುವ ದೇಶವಿದೆ ಅಲ್ಲಿಯೂ ಭಾರತೀಯರು ನೆಲೆನಿಂತಿದ್ದರು. ಅಲ್ಲಿನ ಈಗ ಕೆಂಬೋಡಿಯಾ ಎಂದು ಕರೆಯಲ್ಪಡುತ್ತಿರುವ ಭಾಗಕ್ಕೆ ಕಾಂಭೋಜವೆಂದು ಹೆಸರಿಟ್ಟಿದ್ದರು. ಪಟ್ಟಣಗಳಲ್ಲಿ ಶಿವಪುರ, ಈಶ್ವರಪುರ, ವಿಷ್ಣುಪುರಗಳೂ ಇದ್ದುವು. ಅಂಗ್‌ಕೋರ್‌ವಾಟ್ ಎಂಬಲ್ಲಿರುವ ಪ್ರಾಚೀನ ದೇವಸ್ಥಾನವು ಈಗಲೂ ಭಾರತೀಯರ ಕಲೆಯ ನಿದರ್ಶನವಾಗಿ ಉಳಿದಿದೆ.

ಪಶ್ಚಿಮದಲ್ಲಿ ಕಾಯ್ರೋವಿನಿಂದ ಹಿಡಿದು ಅರಬಸ್ತಾನ, ಇರಾನು, ಮಧ್ಯ ಆಸ್ಯ, ಚೀನಾ, ಫಿಲಿಪ್ಪೈನ್ ದ್ವೀಪಗಳು, ಇಂಡೋಚೀನಾ, ಸಯಾಮು, ಬರ್ಮಾ, ಮಲಯ, ಇಂಡೋನೇಶ್ಯಾ, ಸಿಂಹಳ—ಹೀಗೆ ಭೂಗೋಲದ ಪೂರ್ವಾರ್ಧದಲ್ಲಿನ ದೇಶಗಳಲ್ಲಿ ಹಲವು ಭಾರತದ ಧರ್ಮ ಭಾರತದ ಕಲೆ, ಭಾರತದ ಸಂಸ್ಕೃತಿಗಳ ಮುದ್ರೆಯನ್ನು ಧರಿಸಿವೆ. ಭಾರತೀಯರೇ ಪರದಾಸ್ಯದಲ್ಲಿ ಬಿದ್ದು, ಸಾಹಸ ಕಾರ್ಯವೆಂದರೆ ಹೆದರಿ, ಸಾಗರ ಪ್ರಯಾಣವೆಂದರೆ ಭ್ರಷ್ಟವೆಂದೆಣಿಸಿ, ತಮ್ಮ ಗೂಡೊಳಗೆ ಮುದುರಿ ಬಿದ್ದ ಕಾಲದಲ್ಲಿ ಈ ವೈಭವದ ನೆನಪು ಸಹ ಮರೆತು ಹೋಗಿತ್ತು. ಪಾಶ್ಚಾತ್ಯ ವಿದ್ವಾಂಸರ ಶ್ರಮದಿಂದಾಗಿ ಭಾರತೀಯರ ಸಂಸ್ಕೃತಿಯ ಕುರುಹುಗಳೆಲ್ಲ ಎಲ್ಲೆಡೆಗಳಿಂದಲೂ ಕಲೆ ಹಾಕಲ್ಪಟ್ಟು ನಮ್ಮ ಪಿತ್ರಾರ್ಜಿತದ ಅರಿವು ನಮಗಾಗುವಂತಾಯಿತು.

ಭಾರತವು ಎಚ್ಚೆತ್ತಿದೆ. ಹೊರನಾಡುಗಳಿಂದ ಧರ್ಮಪ್ರಚಾರಕ್ಕೆ ಇಲ್ಲಿಗೆ ಇತರರು ಬರುವಂತೆ ಇಲ್ಲಿಂದಲೂ ಪ್ರಾಚೀನ ಬೌದ್ಧ, ಬ್ರಾಹ್ಮಣ, ಪ್ರಚಾರಕರಂತೆ ಭಾರತದ ಬೋಧಕರು ಹೊರಗೆ ಪ್ರಯಾಣಿಸಲಾರಂಭಿಸಿದ್ದಾರೆ. ಹಿಂದೂ, ಬೌದ್ಧ, ಜೈನ ಮತಗಳ ಪ್ರಚಾರವಲ್ಲ; ಹಿಂದುವಿರಲಿ ಮುಸ್ಲಿಮನಿರಲಿ, ಕ್ರೈಸ್ತನಿರಲಿ, ತಂತಮ್ಮ ಮತದ ಅತ್ಯುಚ್ಚ ಬೋಧನೆಗಳನ್ನು ಪಾಲಿಸುವ ಭಕ್ತನಿಗೆ ಮುಕ್ತಿಯಿದೆ ಎಂದು ರಾಮಕೃಷ್ಣ ಪರಮಹಂಸರು ಭಾರತದ ಪ್ರಾಚೀನ ತತ್ವವನ್ನೇ ಇಂದಿನ ನುಡಿಯಲ್ಲಿ ಸಾರಿದುದನ್ನು ಅವರ ಪಟ್ಟಶಿಷ್ಯ ಸ್ವಾಮಿ ವಿವೇಕಾನಂದರು ಪಾಶ್ಚಾತ್ಯ ದೇಶಗಳವರಿಗೂ ಬೋಧಿಸಿದರು. ಇದರ ಪ್ರತ್ಯಕ್ಷ ಪರಿಣಾಮವು ಅಲ್ಪವೇ ಇದ್ದರೂ ಭಾರತದೊಡನೆ ಸಹ ಇತರರಿಗೆ ಸಾರುವ ಸುವಾರ್ತೆ ಇದೆ ಎಂಬುದರ ಅಸ್ಪಷ್ಟ ಕುರುಹು ಇದು—ಎಂದಾದರೂ ಭಾವಿಸಬಹುದು.



ಭಾರತದ ಕೇಂದ್ರ ಶಾಸನಸಭಾಭವನ.

ಹಿಂಬದಿಯ ಚಿತ್ರ: 1947ರಲ್ಲಿ ಭಾರತ ಇತಿಹಾಸದಲ್ಲಿ ಮೊದಲ ಬಾರಿ ಜನತಾ ಸರಕಾರದ ಪ್ರತಿನಿಧಿಗಳು ಕೇಂದ್ರ ಶಾಸನಸಭಾಭವನದಲ್ಲಿ ಸಭೆಸೇರಿರುವುದು.

# ೬. ರಾಜ್ಯದರ್ಶನ

ಸ್ವಭಾವತಃ ಮನುಷ್ಯರು ಶಾಂತಿಪ್ರಿಯರು, ನ್ಯಾಯಶೀಲರು, ನಿಃಸ್ವಾರ್ಥಿಗಳು ಎಂದು ಮಾನವ ಕುಲದ ಹುಟ್ಟುಗುಣಗಳ ವಿಚಾರದಲ್ಲಿ ಆದರ್ಶವಾದಿಗಳು ಸಮರ್ಥಿಸುವುದನ್ನು ಆಗಾಗ ಕೇಳುತ್ತೇವೆ. ಹಿಂದೂ ಪುರಾಣಗಳಲ್ಲಾಗಲೀ ಇತರ ದೇಶಗಳ ಧರ್ಮಗ್ರಂಥಗಳಲ್ಲಾಗಲೀ ಹೇಳುವಂತೆ ಆರಂಭದಲ್ಲಿ ಮನುಷ್ಯರು ಪಾಪರಹಿತರಾಗಿದ್ದರೆಂದೂ ಯುಗಪರಿವರ್ತನೆಯಿಂದಾಗಿ ಪಾಪಿಗಳಾಗುತ್ತ ಬಂದರೆಂದೂ ಆದರ್ಶವಾದಿಗಳ ಹೇಳಿಕೆ. ಮಾನವರು ಸಹಜವಾಗಿ ಮೃಗ ಸಮಾನರೆಂದೂ ಕುಟುಂಬದವರ ಬೋಧನೆ, ಸಮಾಜದ ಒತ್ತಾಯ, ಸರಕಾರದ ಬೆದರಿಕೆಗಳಿಂದಲೇ ಅವರು ನೀತಿವಂತರಾಗುವರೆಂದೂ ಇನ್ನೊಂದು ಪಕ್ಷದವರ ಅಭಿಪ್ರಾಯ. ಗೊರಿಲ್ಲವೊಂದು ತನ್ನ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ತನಗಾಗಿ ಇತರ ಗೊರಿಲ್ಲಗಳೊಡನೆ ಯಾವಾಗಲೂ ಜಗಳಕ್ಕೆ ಸಿದ್ಧವಾಗಿರುವಂತೆ ಆದಿ ಮನುಷ್ಯರಿದ್ದರೆಂದೂ ಕ್ರಮೇಣ ಕುಟುಂಬವಿದ್ದುದು ಬಳಗವಾಗಿ, ಬಳಗವು ಬಳ್ಳಿಯಾಗಿ ಬಳ್ಳಿಯು ಜಾತಿಯಾಗಿ ಬೆಳೆದು ಕ್ರಮ, ನೀತಿ ನಿಯಮಗಳು ಹುಟ್ಟಿದುವೆಂದೂ ಈ ಪಕ್ಷದವರ ಹೇಳಿಕೆ.

ಸತ್ಯಸ್ಥಿತಿ ಈ ಎರಡು ವಾದಗಳ ಮಧ್ಯದಲ್ಲಿದೆ ಎನ್ನಬಹುದು. ಮನುಷ್ಯನಲ್ಲಿ ಉತ್ತಮ ಗುಣಗಳಿಲ್ಲದಿದ್ದರೆ ಅವನ್ನು ಬೆಳೆಸಲಿಕ್ಕಾಗಲಿಕ್ಕಿಲ್ಲ. ಹಾಗೆಂದು ಕೆಟ್ಟ ಗುಣಗಳೂ ಇವೆ; ಸುಗುಣಗಳನ್ನು ಪೋಷಿಸಿ ದುರ್ಗುಣಗಳನ್ನು ಕಿತ್ತು ಕೃಷಿಮಾಡದಿದ್ದರೆ ದುರ್ಗುಣಗಳೇ ಪ್ರಬಲವಾಗುವುವು. ಆದುದರಿಂದ ವ್ಯಕ್ತಿಯನ್ನು ಸಮಾಜವೂ ಸಮಾಜವನ್ನು ಸರಕಾರವೂ ಅಂಕೆಯಲ್ಲಿಟ್ಟುಕೊಳ್ಳುವುದು ಅಗತ್ಯ. ಸಮಾಜದ ಹಿತವನ್ನು ಚಿಂತಿಸುತ್ತಿದ್ದು ಅದಕ್ಕೆ ಅನುಕೂಲರಾಗಿರುವವರನ್ನು ರಕ್ಷಿಸಿ ಪ್ರತಿಕೂಲರಿದ್ದವರನ್ನು ಶಿಕ್ಷಿಸುವ ವ್ಯವಸ್ಥೆಯು ಇರಲೇ ಬೇಕೆಂದು ಆದಿವಾಸಿಗಳ ಸಮಾಜವ್ಯವಸ್ಥೆಯನ್ನು ಪರಿಶೀಲಿಸಿದರೂ ತಿಳಿದುಬರುವುದು. ಈ

ವ್ಯವಸ್ಥೆಗೆ ನಾವು ಸರಕಾರವೆಂದು ಹೇಳುವಂತೆ ಪ್ರಾಚೀನ ಭಾರತೀಯರು ದಂಡವೆಂದು ಹೆಸರಿಟ್ಟಿದ್ದರು. ದಂಡವಿಲ್ಲದಿದ್ದರೆ ಸಮುದ್ರದಲ್ಲಿ ದೊಡ್ಡ ಮೀನು ಸಣ್ಣ ಮೀನನ್ನು ನುಂಗುವಂತೆ ಬಲಿಷ್ಠರು ನಿರ್ಬಲರನ್ನೂ ಅನೀತಿವಂತರು ನೀತಿವಂತರನ್ನೂ ಸುಲಿಗೆ ಮಾಡುವುದು ಖಂಡಿತ ಎಂಬ ತತ್ವಕ್ಕೆ ಭಾರತೀಯರು ಮತ್ಸ್ಯ ನ್ಯಾಯವೆಂದು ಹೇಳುತ್ತಿದ್ದರು. ಹದಿನಾರನೇ ಶತಮಾನದ ಆಂಗ್ಲಲೇಖಕ ಹೋಬ್ಸನ ಮಹಾಮತ್ಸ್ಯ(Leviathan) ಎಂಬ ಗ್ರಂಥದಲ್ಲಿ ಸಾಧಿಸಲ್ಪಟ್ಟ ತತ್ವವೂ ಇದೇ.

ದಂಡದ ಅವಶ್ಯಕತೆಯನ್ನು ತಿಳಿದ ಭಾರತೀಯರು ದಂಡಧಾರಿ ಯಾರಾಗಬೇಕೆಂದೂ ವಿಚಾರಮಾಡಿದ್ದಾರೆ. ವೇದಕಾಲದಲ್ಲಿ ದಂಡಧಾರಿಯು ರಾಜನು. ಇತರರು ತಮ್ಮ ಮೇಲೇರಿ ಬಂದಾಗ, ತಾವು ಇತರರ ಮೇಲೆ ಬೀಳುವಾಗ ಒಂದು ಸೈನ್ಯಕ್ಕೆ ಒಬ್ಬನೇ ನಾಯಕನಿರಬೇಕು, ಯುದ್ಧಕಾಲವು ಚರ್ಚೆ, ಅಭಿಪ್ರಾಯಭೇದಗಳಿಗೆ ಸಮಯವಲ್ಲ. ಆರ್ಯರು ಭಾರತಕ್ಕೆ ಹೊಸಬರಾಗಿರುವಾಗ, ಆಗಾಗ ಯುದ್ಧಭಯವಿದ್ದಾಗ ಸಹಜವಾಗಿ ಸೇನಾನಾಯಕನೂ ದಂಢಧಾರಿಯೂ ಒಬ್ಬನೇ ಆಗಿದ್ದು ಅವನೇ ರಾಜನೆಂದು ಕರೆಯಲ್ಪಡುತ್ತಿದ್ದನು. ಅರಸನ ಮಗನೇ ಉತ್ತಮ ಸೇನಾನಿಯಾಗಬೇಕೆಂದಿಲ್ಲ. ಆದ್ದರಿಂದ ಆಯಾ ಕಾಲದ ಸಂದರ್ಭಕ್ಕನುಗುಣವಾಗಿ ಕೆಲವೊಮ್ಮೆ ಅರಸು ಮಗನನ್ನೂ ಇನ್ನು ಕೆಲವು ಸಲ ಬೇರೆಯವರನ್ನೂ ರಾಜರನ್ನಾಗಿ ಪಟ್ಟಕಟ್ಟಿ ಅಭಿಷೇಕ ಮಾಡುವ ಹೊಣೆಗಾರಿಕೆ ಋಷಿಗಳೇ ಮೊದಲಾದ ವಿದ್ವಜ್ಜನರ ಮೇಲಿತ್ತು.

ಅಲ್ಲಲ್ಲಿ ಶಾಂತಿಮಯ ವಾತಾವರಣವಿದ್ದೆಡೆಗಳಲ್ಲಿ ಗಣರಾಜ್ಯಗಳೆಂದೂ ಜಾನಪದಗಳೆಂದೂ ಕರೆಯಲ್ಪಡುತ್ತಿದ್ದ ಚಿಕ್ಕ ಚಿಕ್ಕ ಪ್ರಜಾಪ್ರಭುತ್ವಗಳಿದ್ದುವು. ಗಣರಾಜ್ಯಗಳಲ್ಲಿ ಮುಖ್ಯಸ್ಥರನ್ನು ಗಣದ ಹಿರಿಯರು ಆರಿಸುತ್ತಿದ್ದರು. ಮುಖ್ಯಸ್ಥರ ಪರಿಷತ್ತು ಸೇರಿ, ಗಣದ ಹಿತಕ್ಕಾಗಿ ಕ್ರಮಗಳನ್ನು ಕೈಗೊಂಡು, ನೀತಿ, ನ್ಯಾಯಗಳನ್ನು ನಿಶ್ಚೈಸಿ, ವಿವಾದಗಳನ್ನು ತೀರ್ಮಾನಿಸುತ್ತಿದ್ದರು. ಅಲೆಕ್ಸಾಂದರನು ಭಾರತಕ್ಕೆ ಬಂದಾಗ ಪುರೂರವನಂಥ

ಅರಸನೊಡನೆ ಮಾತ್ರವಲ್ಲ, ಗಣರಾಜ್ಯಗಳೊಡನೆಯೂ ಯುದ್ಧ ಮಾಡಬೇಕಿತ್ತು. ಬುದ್ಧನ ಕಾಲದಲ್ಲಿಯೂ ಗಣರಾಜ್ಯಗಳಿದ್ದುವೆಂದು ಬೌದ್ಧಗ್ರಂಥಗಳಿಂದ ತಿಳಿದುಬರುತ್ತದೆ. ಗಣರಾಜ್ಯಗಳಲ್ಲಿ ಮತದಾನ, ಪರಿಷತ್ತಿನ ಸಭಾಕ್ರಮ, ಸೂಚನೆಗಳನ್ನು ಮುಂದಿಸುವ ರೀತಿ, ಚರ್ಚೆಯ ಹೊತ್ತಿನಲ್ಲಿ ಪಾಲಿಸಬೇಕಾದ ನಿರ್ಬಂಧಗಳು, ತೀರ್ಮಾನವನ್ನು ನಿಶ್ಚೈಸುವ ರೀತಿ—ಇವನ್ನೆಲ್ಲ ಬೌದ್ಧಭಿಕ್ಷುಗಳ ಸಂಘವೂ ಅನುಸರಿಸುತ್ತಿದ್ದುದರಿಂದ ಬೌದ್ಧರ ಧರ್ಮಗ್ರಂಥಗಳಲ್ಲಿ ಗಣರಾಜ್ಯಗಳ ಆಡಳಿತೆಯ ಚಿತ್ರವನ್ನು ಕಾಣಬಹುದು.

ಗಣರಾಜ್ಯದಲ್ಲಿ ಪ್ರಜೆಗಳಿಗೂ ಆಳುವವರಿಗೂ ನಿಕಟಸಂಬಂಧವಿರಬೇಕಾದುದರಿಂದ ವಿಸ್ತಾರವಾದ ಸಾಮ್ರಾಜ್ಯವು ಗಣರಾಜ್ಯವಾಗಿರುವುದು ಅಸಾಧ್ಯವಾಗಿತ್ತು. ಪ್ರಾಚೀನ ಗ್ರೀಕರ ಗಣರಾಜ್ಯಗಳು ಪೌರಸಭೆಗಳಂತೆ ಕೆಲವೇ ಚದರಮೈಲು ವಿಸ್ತಾರದಲ್ಲಿರುವ ಜನರನ್ನಾಳುತ್ತಿದ್ದುವು. ಗಣರಾಜ್ಯದಲ್ಲಿ ಪ್ರಬಲನಾದ ಯೋಧನು ಹುಟ್ಟಿ ಸಾಮ್ರಾಜ್ಯ ಸ್ಥಾಪಿಸಿದಾಗ ಹೆಸರಿಗೆ ಮಾತ್ರ ಗಣರಾಜ್ಯವಾಗಿದ್ದು ವಿಜಯಿಯಾದ ಸೇನಾನಿಯೇ ಸರ್ವಾಧಿಕಾರಿಯಾಗುತ್ತಿದ್ದನು.

ಚಂದ್ರಗುಪ್ತಮೌರ್ಯನ ಕಾಲದಿಂದ ಗಣರಾಜ್ಯಗಳು ಒಂದೊಂದಾಗಿ ಸಾಮ್ರಾಜ್ಯಗಳಲ್ಲಿ ಲೀನವಾದುವು, ಸಮ್ರಾಟನೇ ಸರ್ವಾಧಿಕಾರಿಯಾದನು. ಚಂದ್ರಗುಪ್ತನ ಕಾಲದ ಶಾಸನದ ಸಂಪೂರ್ಣ ವಿವರವನ್ನು ಅವನ ಘನತೆಗೆ ಕಾರಣನಾದ ಚಾಣಕ್ಯ (ಕೌಟಿಲ್ಯ) ನು ಬರೆದ ಅರ್ಥಶಾಸ್ತ್ರದಲ್ಲಿ ಕಾಣಬಹುದು. ಅರಸನೇ ಸರ್ವಾಧಿಕಾರಿಯಾಗಿದ್ದರೂ ಮಂತ್ರಿಗಳ ಹಿತವಚನವನ್ನು ಗಮನಿಸಿಯೇ ರಾಜ್ಯವಾಳುತ್ತಿದ್ದನು.

ಮೌರ್ಯ ಸಾಮ್ರಾಜ್ಯದ ಕ್ರಮವನ್ನೇ ಪ್ರತಿಯೊಂದು ಭಾಗದ ಪ್ರತಿಯೊಂದು ಶತಮಾನದ ಸಮ್ರಾಟರು ತಂತಮ್ಮ ದೇಶಕಾಲಗಳಿಗೆ ತಕ್ಕಂತೆ ಅಳವಡಿಸಿಕೊಂಡರು. ಶಿವಾಜಿಯ ಕಾಲದಲ್ಲಿ ಸಹ ಅಷ್ಟ ಪ್ರಧಾನರೆಂಬ ಮಂತ್ರಿಗಳಿದ್ದರು; ಸಾಮ್ರಾಜ್ಯದ ಒಂದೊಂದು ಭಾಗಕ್ಕೊಬ್ಬ ಮೇಲಧಿಕಾರಿಯೂ ಅವನ ಅಂಕೆಯಲ್ಲಿ ಸೈನ್ಯಗಳೂ ಇತರ ನೌಕರರೂ ಇದ್ದರು.

ಕೇಂದ್ರದಲ್ಲಿರುವ ಸಮ್ರಾಟನು ಪ್ರಜೆಗಳಿಂದ ನೇರಾಗಿ ತೆರಿಗೆಗಳನ್ನು ಪಡೆಯುವುದೂ ಆಡಳಿತೆಯ ವಿಚಾರ ನಡೆಸುವುದೂ ತನ್ನ ರಾಜಧಾನಿಯ ಹತ್ತಿರದ ಭಾಗಗಳಲ್ಲಿ ಮಾತ್ರ. ಇತರ ಭಾಗಗಳ ಆಡಳಿತೆ ಹಿಂದೆ ಅಲ್ಲಿ ಆಳಿ ಬಂದು ಈಗ ಸಮ್ರಾಟನ ಅಧೀನರೆಂದು ಒಪ್ಪಿಕೊಂಡ ಅರಸರಾಗಲಿ ಸಮ್ರಾಟನಿಂದ ನೇಮಿಸಲ್ಪಟ್ಟ ಮಾಂಡಳಿಕರಾಗಲೀ ನಡೆಸುತ್ತಿದ್ದರು. ಮಾಂಡಳಿಕರು ತಮ್ಮ ಮಂಡಳವನ್ನು ತಿರುಗಿ ಈಗಿನ ಜಿಲ್ಲೆ ತಾಲೂಕುಗಳಂಥ ವಿಭಾಗಗಳನ್ನಾಗಿ ಮಾಡಿ ಅಲ್ಲಲ್ಲಿ ಪ್ರಬಲ ನಾಯಕರನ್ನು ನೇಮಿಸಿ ಅಥವ ಇದ್ದವರಲ್ಲಿ ಪ್ರಬಲರಾದವರನ್ನು ತಮ್ಮ ಆಜ್ಞಾನುವರ್ತಿಗಳಾಗಿ ಮಾಡಿ ಅವರ ಮೂಲಕ ಆಡಳಿತೆಯನ್ನು ನಡೆಸುತ್ತಿದ್ದರು. ಪ್ರತಿಯೊಂದು ಗ್ರಾಮದವರು ತಮ್ಮ ಗ್ರಾಮವಿರುವ ಭಾಗದ ನಾಯಕನಿಗೆ ಇಂತಿಷ್ಟೇ ತೆರಿಗೆ ಕೊಡಬೇಕೆಂದು ಅವನು ನಿಶ್ಚಯಿಸುವನು; ನಾಯಕನು ಮಾಂಡಳಿಕನಿಗೆ, ಮಾಂಡಳಿಕನು ಸಮ್ರಾಟನಿಗೆ ತೆರಿಗೆ (ಕಪ್ಪ) ತೆರಬೇಕಿತ್ತು. ಅಲ್ಲದೆ ಪ್ರತಿಯೊಬ್ಬ ಮಾಂಡಳಿಕನೂ ನಾಯಕನೂ ಇಂತಿಷ್ಟೇ ಸೈನ್ಯದವರನ್ನು ಪೋಷಿಸಬೇಕೆಂದೂ ನಿಶ್ಚಯಿಸುತ್ತಿದ್ದರು. ಹೀಗಾಗಿ ಪ್ರಜೆಗಳಲ್ಲಿ ಬಹುಮಂದಿಗೆ ಸಮ್ರಾಟನೊಡನೆ ನೇರಾದ ಸಂಬಂಧವಿರಲಿಲ್ಲ, ಸಮ್ರಾಟನು ಯಾರಾದರೂ ಅವರ ಮಟ್ಟಿಗೆ ಸ್ಥಳೀಯ ಶಾಸನವು ಸರಿ ಇರುವಷ್ಟು ಕಾಲ ಅವರಿಗೆ ಹೊರಗಿನ ಗೊಡವೆಯೇ ಇದ್ದಿಲ್ಲ.

ಸ್ಥಳೀಯ ವ್ಯವಸ್ಥೆಯು ಆಯಾ ಗ್ರಾಮದ ಪಂಚರ ಕೈಯಲ್ಲೇ ಇದ್ದಿತು. ಪಂಚರನ್ನು ಗ್ರಾಮದ ವಯಸ್ಕರು ಆರಿಸುವಂತಹ ಕ್ರಮವಿದ್ದರೂ ಹೆಚ್ಚಾಗಿ ಕೆಲವು ಮನೆತನಗಳವರೇ ಆರಿಸಲ್ಪಡುತ್ತಿದ್ದರು. ಕಡೆಕಡೆಗೆ ಪಟ್ಟಣ ಸೆಟ್ಟಿಯವರ ಮನೆತನವೆಂದು ಕನ್ನಡನಾಡಿನ ಗ್ರಾಮಗಳಲ್ಲಿ ಕೇಳಿ ಬರುವಂತೆ ಭಾರತದ ಎಲ್ಲಾ ಭಾಗಗಳಲ್ಲಿಯೂ ಕೇಳಿಬರುತ್ತಿತ್ತು. ಆರಿಸುವಿಕೆಯಲ್ಲಿಯೂ ಬಹುಮತವಿರಬೇಕೆಂಬ ಕ್ರಮವು ಕೆಲವೆಡೆಗಳಲ್ಲಿತ್ತೆಂದೂ ಇನ್ನು ಕೆಲವು ಕಡೆಗಳಲ್ಲಿ ಜನರಿಂದ ಸೂಚಿಸಲ್ಪಟ್ಟ ಯೋಗ್ಯರ ಹೆಸರನ್ನಾಗಲೀ ಸಂಜ್ಞೆಯನ್ನಾಗಲೀ ಓಲೆಯ ತುಂಡಿನಲ್ಲಿ ಬರೆದು ಪಾತ್ರೆಯಲ್ಲಿಟ್ಟು ದೇವಸ್ಥಾನದಲ್ಲಿರಿಸಿ, ಪ್ರಾರ್ಥನೆ ಮಾಡಿ, ಎಲ್ಲರೆದುರು ಪಾತ್ರೆ,

ಯನ್ನು ಕುಲುಕಿಸಿ, ಚಿಕ್ಕ ಮಗುವಿನಿಂದ ಒಂದು ಚೀಟನ್ನು ಆರಿಸಿ ಅದರಲ್ಲಿ ತೋರಿದವನನ್ನೇ ಆರಿಸುವ ಕ್ರಮವಿತ್ತೆಂದೂ ತಿಳಿದುಬಂದಿದೆ.

ಗ್ರಾಮಗಳ ಆಡಳಿತೆಯು ಸ್ಥಳೀಯ ಪಂಚರಿಂದ ನಡೆಸಲ್ಪಡುವ ಕ್ರಮ: ಭಾರತದ ಪ್ರತಿಯೊಂದು ಕಡೆಯಲ್ಲೂ ಬ್ರಿಟಿಷರ ರಾಜ್ಯಭಾರವಾರಂಭವಾಗುವ ವರೆಗೆ ಮುಂದರಿಸಲ್ಪಟ್ಟಿತ್ತು. ಹೊರಗಿನಿಂದ ಸೇನಾನಿಗಳು ಬಂದು ಸಮ್ರಾಟರನ್ನಾಗಲೀ ಮಾಂಡಳಿಕರನ್ನಾಗಲೀ ಸೋಲಿಸಿದರೆ ಬೇರೆ ಸಮ್ರಾಟ ಅಥವ ಬೇರೆ ಮಾಂಡಳಿಕರಾಗುತ್ತಿದ್ದರೇ ಹೊರತು, ಗ್ರಾಮದ ಮೇಲ್ವಿಚಾರದಲ್ಲಿ ಕೈ ಹಾಕುತ್ತಿರಲಿಲ್ಲ. ಸಾಮ್ರಾಜ್ಯದ ಆಂತರಿಕ ವಿಭಾಗಗಳಿಗೆ ನಮ್ಮಲ್ಲಿ ರಾಜ್ಯ, ಸೀಮೆ, ಹೋಬಳಿ, ಮಾಗಣೆ, ಊರು (ಹಳ್ಳಿ) ಮೊದಲಾದ ಹೆಸರುಗಳಿದ್ದಂತೆಯೇ ತಮಿಳರಲ್ಲಿ ನಾಡು, ಕುಡ, ಊರುಗಳೆಂದೂ ಇತರ ಕಡೆಗಳಲ್ಲಿ ಬೇರೆಯೇ ಹೆಸರುಗಳೂ ವಾಡಿಕೆಯಲ್ಲಿದ್ದುವು.

ಈಸ್ಟ್ ಇಂಡಿಯಾ ಕಂಪೆನಿಯು ವ್ಯಾಪಾರಿಗಳಾಗಿ ಬಂದ ಬ್ರಿಟಿಷರಿಗೆ ಆಡಳಿತೆಯ ಪಾಲೂ ಸಿಕ್ಕುವಂತಾದಾಗ ಮೊದಮೊದಲು ಹಿಂದಿನಂತೆ ಒಂದೊಂದು ತುಂಡಿನಿಂದ ಇಂತಿಷ್ಟೇ ತೆರಿಗೆ ತೆರಲಿಕ್ಕೆ ಒಪ್ಪಿದ ಜಮೀನ್ದಾರನಿಗೆ ಅಲ್ಲಿನ ಆಡಳಿತೆಯನ್ನು ಬಿಟ್ಟುಕೊಡುತ್ತಿದ್ದರು. ಒಂದು ಸಂತೆಯ ಸುಂಕ ವಸೂಲಿ, ಕಡವಿನ ದೋಣಿಯ ಹಕ್ಕು ಇವನ್ನು ಹರಾಜು (ಏಲಂ) ಮಾಡುವಂತೆ, ಹೆಚ್ಚು ತೆರಿಗೆ ತೆರುವುದಕ್ಕೆ ಒಪ್ಪಿದವರಿಗೆ ವಹಿಸಿಕೊಡುತ್ತಿದ್ದರು. ಮದ್ರಾಸು, ಮುಂಬಯಿ, ಕಲ್ಕತ್ತೆಗಳಲ್ಲಿ ಕಂಪೆನಿಯು ಕಡೆಯಿಂದ ಆಡಳಿತೆ ನಡೆಸಲಿಕ್ಕೆ ಗವರ್ನರರೂ ಅವರಿಗೆ ಸಲಹೆ ಕೊಡುವ ಅಧಿಕಾರಿ ಮಂಡಳಗಳೂ ಇದ್ದುವು.

ಕಂಪೆನಿಯ ವಶದಲ್ಲಿ ಬಂದ ಕ್ಷೇತ್ರವು ವಿಸ್ತೃತವಾದಾಗ, ಇನ್ನೂ ಖಾಸಗಿ ಕಂಪೆನಿಯ ಕೈಯಲ್ಲಿ ಎಲ್ಲವನ್ನೂ ಬಿಡುವುದು ಸರಿಯಲ್ಲವೆಂದು ಬ್ರಿಟಿಷ್ ಪಾರ್ಲಿಮೆಂಟು 1771ರಲ್ಲಿ ಕಂಪೆನಿಯ ಆಡಳಿತೆಯ ಮೇಲ್ವಿಚಾರವನ್ನು ಬ್ರಿಟಿಷ್ ಸರಕಾರ ನಡೆಸಬೇಕೆಂದು ತೀರ್ಮಾನಿಸಿತು.

ರೆಗ್ಯುಲೇಟಿಂಗ್ ಆಕ್ಟೆಂಬ ಶಾಸನದನ್ವಯ ಕಲ್ಕತ್ತೆಯ ಗವರ್ನರನು ಗವರ್ನರ ಜನರಲನಾಗಿ ಬೇರೆ ಗವರ್ನರರ ಮೇಲೆ ಅಧಿಕಾರವುಳ್ಳವನಾದನು. ಇಂಗ್ಲಿಷರ ಕೋರ್ಟುಗಳೂ ಸ್ಥಾಪಿತವಾದುವು; ಆಡಳಿತೆಯು ಕೇಂದ್ರೀಕರಿಸಲ್ಪಡಲಿಕ್ಕೆ ಆರಂಭವಾಯಿತು.

1853ರಲ್ಲಿ ಪಾರ್ಲಿಮೆಂಟು ಚಾರ್ಟರ್ ಆಕ್ಟನ್ನು ಮಾಡಿ ಕಂಪೆನಿಯು ವ್ಯಾಪಾರವನ್ನು ಬಿಟ್ಟು ಆಡಳಿತೆಯನ್ನು ಮಾತ್ರ ನೋಡಬೇಕೆಂದೂ ಭಾರತೀಯರನ್ನು ಸಹ ಅಧಿಕಾರಿ ವರ್ಗಕ್ಕೆ ಸೇರಿಸಬೇಕೆಂದೂ ತೀರ್ಮಾನಿಸಿತು. ಅಷ್ಟರ ವರೆಗೆ ಒಂದೆಡೆ ವ್ಯಾಪಾರ, ಒಂದೆಡೆ ಆಡಳಿತೆ ಎಂದು ಕಂಪೆನಿಯು ತನ್ನ ಅಧಿಕಾರ ಬಲದಿಂದ ವ್ಯಾಪಾರದ ಲಾಭ ಹೆಚ್ಚಿಸಿದಂತೆ ಬ್ರಿಟಿಷ್ ನೌಕರರಲ್ಲಿ ಬಹುಜನರೂ ಅವರ ಗುಮಾಸ್ತರಾದ ಇಲ್ಲಿನವರೂ ಸರಬರಾಜು, ಲಂಚ, ವಂಚನೆಗಳ ಮೂಲಕ ಜನರ ಸಂಪತ್ತನ್ನು ದೋಚಿಕೊಳ್ಳುವುದರಲ್ಲೇ ಮಗ್ನರಾಗಿದ್ದರು. ಇಂಗ್ಲಾಂಡಿನಿಂದ ಇಲ್ಲಿಗೆ ಬರುವ ತರುಣ ನೌಕರರನ್ನುದ್ದೇಶಿಸಿ ಅವರ ತಾಯ್ತಂದೆಯರು "ಹಣ ಸಂಪಾದಿಸು, ಮಗೂ; ನ್ಯಾಯದಿಂದಾದರೆ ಹಾಗೆ, ಹೇಗಾದರೂ ಮಾಡಿ ಧನವಂತನಾಗು" ಎಂದು ಬೋಧಿಸಿದಂತಿತ್ತೆಂದು ಇಲ್ಲಿ ಮತ್ತೆ ಉದ್ಯೋಗದಲ್ಲಿದ್ದ ವಿಖ್ಯಾತ ಆಂಗ್ಲಸಾಹಿತಿ ಮೆಕಾಲೆ ಬರೆದಿದ್ದಾನೆ.

1857ರಲ್ಲಿ ಉತ್ತರ ಭಾರತದ ಸೈನಿಕರು ದಂಗೆಯೆದ್ದು ಅಯೋಧ್ಯೆಯ ನವಾಬ ಮತ್ತು ಝಾನ್ಸಿಯ ಮಹಾರಾಣಿ ಲಕ್ಷ್ಮೀ ಬಾಯಿ ಮೊದಲಾದವರ ನೇತೃತ್ವದಲ್ಲಿ ಕಂಪೆನಿ ಸರಕಾರವನ್ನು ಸಂಪೂರ್ಣ ನಡುಗಿಸಿಬಿಟ್ಟರು; ಬ್ರಿಟಿಷರ ಆಡಳಿತೆ ಅಂತ್ಯವಾಯಿತೆಂಬಂತೆ ತೋರಿತು. ಆದರೆ ಪಂಜಾಬು, ಬಂಗಾಳ, ದಕ್ಷಿಣ ಭಾರತದವರ ತಾಟಸ್ಥ್ಯದಿಂದಾಗಿ ಬ್ರಿಟಿಷರ ಸೇನೆಗೆ ನಾಲ್ಕು ಕಡೆಗಳಿಂದಲೂ ಸಹಾಯ ಸಿಕ್ಕಿ ದಂಗೆಯನ್ನು ಅಣಗಿಸಲಿಕ್ಕಾಯಿತು. 20 ವರ್ಷ ಪ್ರಾಯದ ಲಕ್ಷ್ಮೀ ಬಾಯಿಯು ಸ್ವತಃ ಯುದ್ಧರಂಗಕ್ಕಿಳಿದು ವೀರಾವೇಶದಿಂದ ಕಾದಾಡಿ ಮಡಿದ ನೆನಪು ರೋಮಾಂಚಕಾರಿಯಾಗಿ ಉಳಿದಿದೆ. ಆಗಿನ ಇತರ ಘಟನೆಗಳಲ್ಲಿ ಇಕ್ಕಡೆಯವರೂ ಸ್ಮರಿಸಲಾರದ ಹಿಂಸಾಚಾರಗಳನ್ನು ಮಾಡಿದ್ದರು.

ಕಂಪೆನಿಯವರ ಮೂಲಕ ಇಷ್ಟು ದೊಡ್ಡ ದೇಶವನ್ನು ಆಳುವುದು ಸರಿಯಲ್ಲವೆಂದೂ ಪ್ರಜೆಗಳ ಹಿತಕಾಂಕ್ಷೆಗಳಿಗೆ ಗಮನ ಹೆಚ್ಚು ಕೊಟ್ಟಿದ್ದರೆ 1857ರ ಭೀಕರ ಸ್ಥಿತಿಯಾಗುತ್ತಿದ್ದಿಲ್ಲವೆಂದೂ ಮನಗಂಡು ಬ್ರಿಟಿಷ್ ಸರಕಾರವು ಕಂಪೆನಿಯನ್ನು ಅಂತ್ಯಗೊಳಿಸಿ, ಬ್ರಿಟಿಷರ ಆಗಿನ ರಾಣಿ ವಿಕ್ಟೋರಿಯಳೇ ಭಾರತದ ರಾಜ್ಞಿಯೆಂದು ಸಾರಿ ಗವರ್ನರ ಜನರಲನ ನೇಮಕ, ಮೇಲ್ವಿಚಾರಗಳನ್ನು ಸೆಕ್ರೆಟರಿ ಆಫ್ ಸ್ಟೇಟ್ ಫೋರ್ ಇಂಡಿಯಾ ಎಂದು ಸಂಬೋಧಿಸಲ್ಪಡುವ ಮಂತ್ರಿಯ ವಶದಲ್ಲಿಟ್ಟರು.

ಕಂಪೆನಿಯ ಆಳ್ವಿಕೆಯ ಆರಂಭ 1757ರಲ್ಲಿ ಎಂದು ಲೆಕ್ಕಿಸಿದರೆ ಅಲ್ಲಿಂದ ಒಂದು ಶತಮಾನ ಕಾಲ ತನ್ನ ಅಧಿಕಾರವು ಇಡೀ ದೇಶದಲ್ಲಿ ಸ್ಥಾಪಿತವಾಗುವಂತೆಯೂ ಕೇಂದ್ರೀಕೃತವಾಗುವಂತೆಯೂ ಕಂಪೆನಿಯವರು ಕೆಲಸಮಾಡಿದರು. ಸಮಗ್ರಭಾರತಕ್ಕೊಂದೇ ಸರಕಾರ, ಒಂದೇ ತರದ ನ್ಯಾಯಪಾಲನೆ, ಒಂದೇ ರಾಜಭಾಷೆ (ಇಂಗ್ಲಿಷು), ಪ್ರಾಂತ್ಯ ಪ್ರಾಂತ್ಯ ಗಳೊಳಗೆ ವಿಶೇಷವಾದ ಸಂಚಾರಾನುಕೂಲತೆಗಳಾಗಿ ವ್ಯಾಪಾರ ವ್ಯವ ಹಾರಗಳ ವೃದ್ಧಿಯಾಯಿತು. ಆದರೆ ಬ್ರಿಟಿಷರ ವ್ಯಾಪಾರವು ಲಾಭ ದಾಯಕವಾಗಬೇಕೆಂಬ ದೃಷ್ಟಿಯಿಂದ ಇಲ್ಲಿನ ಆಡಳಿತೆ ನಡೆದು, ಸಾಲದುದಕ್ಕೆ ಕಂಪೆನಿಯ ನೌಕರರು 'ಮಾಮೂಲಿ' ಎಂಬಂತೆ ಹಣವನ್ನು ದೋಚಿಕೊಂಡು ಹೋಗಿ, ದೇಶದ ಆರ್ಥಿಕ ಸ್ಥಿತಿ ಅಧೋಗತಿಗಿಳಿಯುತ್ತ ಬಂದಿತು. ಗ್ರಾಮವ್ಯವಸ್ಥೆ ಸಹ ಸರಕಾರದ ಇಲಾಖೆಗಳ ವಶವಾಗಿ ಪ್ರತಿಯೊಂದಕ್ಕೂ ಸರಕಾರದ ಮುಖ ನೋಡುವ ಮನೋವೃತ್ತಿ ಜನರಲ್ಲಿ ಬೆಳೆದು 'ಮಾಬಾಪ್ ಸರ್ಕಾರ್' (ಸರಕಾರವೇ ತಾಯ್ತಂದೆ) ಎನ್ನುವ ಕ್ರಮವೂ ನಮ್ಮಿಂದೇನೂ ಸಾಧ್ಯವಿಲ್ಲ, ಐರೋಪ್ಯರಷ್ಟು, ಮುಖ್ಯವಾಗಿ ಬ್ರಿಟಿಷರಷ್ಟು ಜ್ಞಾನವಂತರೂ ನೀತಿವಂತರೂ ಶಕ್ತಿವಂತರೂ ಯಾರೂ ಇಲ್ಲವೆಂಬ ಅಭಿಪ್ರಾಯವೂ ಗಟ್ಟಿಯಾಯಿತು. ಸರಕಾರದ ಶಾಲೆಗಳ ಮೂಲಕವೂ ಬ್ರಿಟಿಷರೇ ಬರೆದ ಚರಿತ್ರಪಠನ ದಿಂದಲೂ ಇದು ಇನ್ನಷ್ಟು ಬಲವಾಯಿತು.

1858ರಲ್ಲಿ ಬ್ರಿಟಿಷ ಸರಕಾರವು ತಮ್ಮ ರಾಣಿಯಿಂದ ಕೊಡಿಸಿದ ಭರವಸೆಗಳಲ್ಲಿ ವರ್ಣಭೇದವಿಲ್ಲದೆ ಎಲ್ಲರಿಗೂ ಸಮಾನಾನುಕೂಲತೆಗಳ

ನ್ನೊದಗಿಸುವುದಿದ್ದರೂ ಭಾರತೀಯರು ತಾಲೂಕಿನ ಆಡಳಿತೆ, ಜಿಲ್ಲೆಯ ಮತ್ತು ಪ್ರಾಂತ್ಯದ ಆಫೀಸುಗಳಲ್ಲಿ ಗುಮಾಸ್ತರ ಸ್ಥಾನ, ಇವುಗಳಿಗಿಂತ ಮೇಲೆ ಹೋಗುವುದು ಕಷ್ಟವಾಯಿತು. ಮೇಲಂತಸ್ತಿನ ಹುದ್ದೆಗಳನ್ನೆಲ್ಲ ಬ್ರಿಟಿಷರಿಗೆ ಮೀಸಲಾಗಿಟ್ಟರು. ಸೈನ್ಯದಲ್ಲಂತೂ ನಾಯಕರೆಲ್ಲ ಬ್ರಿಟಿಷರು, ಸೈನಿಕರಲ್ಲಿ ಸಹ ಬ್ರಿಟಿಷರ ಒಲುಮೆಗೆ ಪಾತ್ರರಾದ ಕೆಲವೇ ಜಾತಿಗಳಿಂದ ಆರಿಸಲ್ಪಟ್ಟವರು. ಇತರರು ಯೋಧರಲ್ಲವೆಂದು ಭಾರತೀಯರಲ್ಲಿ ಬಹು ಮಂದಿಗೊಂದು ಲಾಂಛನದ ಮುದ್ರೆಯೊತ್ತಿದರು.

1861ರಲ್ಲಿ ಗವರ್ನರ ಜನರಲನ ಕೌನ್ಸಿಲಿನವರ ಸಂಖ್ಯೆ ಹೆಚ್ಚಿಸಿ ಅದರಲ್ಲಿ ಸರಕಾರಿ ನೌಕರರಲ್ಲದ ಕೆಲಮಂದಿ ಭಾರತೀಯರನ್ನು ಸೇರಿಸುವ ಕ್ರಮವಾಯಿತು. 1885ರಲ್ಲಿ ಸ್ಥಾಪಿತವಾದ ಕಾಂಗ್ರೆಸಿನ ಮೂಲಕ ಜನರ ಆಶೆ, ಆಕಾಂಕ್ಷೆಗಳು ಬ್ರಿಟಿಷ್ ಸರಕಾರಕ್ಕೆ ತಿಳಿಯು ವಂತಾಯಿತು. ಭಾರತೀಯರಿಗೆ ಉಚ್ಚಾಧಿಕಾರಗಳನ್ನು ಕೊಡಬೇ ಕೆಂಬುದೂ ಗವರ್ನರ ಜನರಲರ ಮತ್ತು ಗವರ್ನರರ ಕೌನ್ಸಿಲುಗಳಿಗೆ ಹೆಚ್ಚುಹೆಚ್ಚು ಮಂದಿ ಭಾರತೀಯರನ್ನು ನೇಮಿಸಬೇಕೆಂದೂ ಒಂದೇ ವರ್ಗದ ಹುದ್ದೆಯಲ್ಲಿರುವ ಭಾರತೀಯರಿಗೆ ಬ್ರಿಟಿಷರಿಗಿಂತ ಕಡಿಮೆ ಸಂಬಳ ಕೊಡಬಾರದೆಂಬುದೂ ಕಾಂಗ್ರೆಸಿನ ಆರಂಭದ ಕೇಳಿಕೆಗಳು. 1892ರಲ್ಲಿ ಬ್ರಿಟಿಷ್ ಸರಕಾರವು ಗವರ್ನರರ ನ್ಯಾಯವಿಧಾಯಕ ಕೌನ್ಸಿಲುಗಳಿಗೆ ನೇಮಿಸುವ ಭಾರತೀಯರಲ್ಲಿ ವಿಶ್ವವಿದ್ಯಾಲಯ, ಜಿಲ್ಲಾಬೋರ್ಡುಗಳು ಕೆಲವರನ್ನು ಆರಿಸಬಹುದೆಂದಾಯಿತು; ಸರಕಾರದ ಕೆಲಸದ ಕುರಿತು ಪ್ರಶ್ನೆ ಎತ್ತುವ, ಟೀಕಿಸುವ ಅಧಿಕಾರವೂ ಸಿಕ್ಕಿತು.

ಇದರಿಂದ ತೃಪ್ತರಾಗದ ಪ್ರಜೆಗಳಲ್ಲಿ ದೇಶಭಕ್ತಿ, ಸ್ವಾತಂತ್ರ್ಯ ಪ್ರೇಮಗಳು ಹೆಚ್ಚುತ್ತ ಬಂದುವು. 1905ರಲ್ಲಿ ಬಂಗಾಳ ಪ್ರಾಂತವನ್ನು ಜನರ ಮನಸ್ಸಿಗೆ ವಿರೋಧವಾಗಿ ವಿಭಜಿಸಿದಾಗ ಸ್ವದೇಶಿ ಆಂದೋಲನವೆಂಬ ಚಳವಳಿಯು ಉಂಟಾಗಿ ಅಲ್ಲಲ್ಲಿ ಹಿಂಸಾಮಾರ್ಗವೂ ಅನುಸರಿಸಲ್ಪಟ್ಟಿತು. 1901ರಲ್ಲಿ ಗವರ್ನರ್ ಜನರಲ್ ಮಿಂಟೋ ಮತ್ತು ಸೆಕ್ರೆಟರಿ ಫೋರ್ ಇಂಡಿಯಾ ಮೋರ್ಲೆಯವರ ಸಲಹೆಯಂತೆ ಪಾರ್ಲಿಮೆಂಟು ಗವರ್ನರ್ ಜನರಲರ ಸಭೆಯಲ್ಲಿ ಸಹ ಆರಿಸಲ್ಪಟ್ಟ ಭಾರತೀಯರಿಗೆ ಸ್ಥಾನಕೊಡು

ವಂತಾಯಿತು. ಗವರ್ನರರ ಸಭೆಯಲ್ಲಿ ವರ್ಗದಾರರಿಂದಾರಿಸಲ್ಪಟ್ಟವರಿಗೂ ಸ್ಥಳಗಳನ್ನು ಕೊಟ್ಟರು. ಹೀಗೆ ಮಾಡುವಾಗ ಹಿಂದೂ ಮತದಾರರಿಗೆ, ಮುಸ್ಲಿಮ್ ಮತದಾರರಿಗೆಂದು ಬೇರೆಬೇರೆ ಕ್ಷೇತ್ರಮಾಡಿ ಜನಾಂಗದಲ್ಲಿ ಭಿನ್ನತೆಯ ಬೀಜವನ್ನು ಬಿತ್ತಿದರು. ಒಂದೆಡೆ ಹೆಚ್ಚುಹೆಚ್ಚು ಮಂದಿ ಭಾರತೀಯರಿಗೆ ಮೇಲಿನ ಅಧಿಕಾರಗಳನ್ನು ಕೊಟ್ಟು, ಇನ್ನೊಂದೆಡೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಚಳವಳಿ ಎಬ್ಬಿಸುವವರನ್ನು ಶಿಕ್ಷಿಸಿ ಮತ್ತೊಂದೆಡೆ ಹಿಂದೂ–ಮುಸ್ಲಿಮ್, ಬ್ರಾಹ್ಮಣ–ಅಬ್ರಾಹ್ಮಣ. ಮೇಲಿನ ಜಾತಿ–ಕೆಳಗಿನ ಜಾತಿಯೆಂದು ವಿಂಗಡಿಸಿ, ಭಾರತೀಯರನ್ನು ಬ್ರಿಟಿಷ್ ಪ್ರಾಂತದವರು ಸಂಸ್ಥಾನದವರೆಂದು ಎಂಟು ಹತ್ತು ರೀತಿಯಲ್ಲಿ ವಿಭಜಿಸುವ ಉಪಾಯವನ್ನು ಕೈಗೊಂಡು ಬ್ರಿಟಿಷರ ಆಳ್ವಿಕೆ ಮುನ್ನಡೆಯಿತು.

1907ರಲ್ಲಿ ಲೋಕಮಾನ್ಯ ತಿಲಕರಿಂದ ತೀವ್ರವಾದ ಚಳವಳಿ ನಡೆಸಲ್ಪಡುವುದನ್ನು ಕಂಡು ಅವರನ್ನು ಮೂರು ಸಲ ಜೈಲಿಗೆ ಕಳುಹಿಸಿದರೂ ಚಳವಳಿಯೇನೂ ಕಡಿಮೆಯಾಗಲಿಲ್ಲ. 1914ರಲ್ಲಿ ಮೊದಲನೇ ಜಾಗತಿಕ ಯುದ್ಧವಾದಾಗ ಭಾರತದ ಸಹಾಯ ಅಗತ್ಯವಾಗಿ 1917ರಲ್ಲಿ ಬ್ರಿಟಿಷ್ ಸರಕಾರವು ಭಾರತವನ್ನು ಸ್ವರಾಜ್ಯದ ದಾರಿಯಲ್ಲಿ ಮುನ್ನಡೆಸುವ ಮಾತುಕೊಟ್ಟಿತು. ಇದರಿಂದಾಗಿ 1919ರಲ್ಲಾದ ಸುಧಾರಣೆಗಳಿಗೆ ಮೊಂಟೆಗ್ಯೂ (ಆಗಿನ ಸೆಕ್ರೆಟರಿ) ಚೆಮ್ಸ್ ಫೋರ್ಡ್ (ಆಗಿನ ಗವರ್ನರ್ ಜನರಲ್) ಅವರ ಸುಧಾರಣೆಗಳೆನ್ನುತ್ತಾರೆ. ಪ್ರಾಂತದ ಲೆಜಿಸ್ಲೇಟಿವ್ ಕೌನ್ಸಿಲಿಗೆ ಆರಿಸಿಬರುವವರ ಸಂಖ್ಯೆಯನ್ನು ಹೆಚ್ಚಿಸಿ, ಮತದಾರರ ಕ್ಷೇತ್ರವನ್ನು ಹೆಚ್ಚಿಸಿ; ಆರಿಸಿ ಬಂದವರಲ್ಲಿ ಕೆಲವರನ್ನು ಮಂತ್ರಿಗಳಾಗಿ ಮಾಡಿ ಅವರಿಗೆ ಕೆಲವು ಇಲಾಖೆಗಳನ್ನು ಒಪ್ಪಿಸುವುದು ಈ ಸುಧಾರಣೆಗಳ ಒಂದು ಅಂಗ; ಕೇಂದ್ರ ಸರಕಾರದ ಕ್ಷೇತ್ರ, ಪ್ರಾಂತ್ಯದ ಕ್ಷೇತ್ರವೆಂದು ಆಡಳಿತೆಯ ಕ್ಷೇತ್ರ ವಿಭಜನೆಯು ಇನ್ನೊಂದು ಅಂಗ.

1920ರಿಂದ ಕಾಂಗ್ರೆಸಿನ ಸೂತ್ರಗಳು ಮಹಾತ್ಮಾಗಾಂಧಿಯವರ ಕೈಗೆ ಬಂದು ಅವರ ನೇತೃತ್ವದಲ್ಲಿ ಅಸಹಕಾರ ಆಂದೋಲನವು ಆರಂಭವಾಗಿ ಶಾಂತಿಮಾರ್ಗದ ಯುದ್ಧವೇ ಮೊದಲಾಯಿತು. ಕೆಲಮಂದಿ ವಕೀಲರೂ ವಿದ್ಯಾರ್ಥಿಗಳೂ ತಂತಮ್ಮ ಉದ್ಯೋಗವನ್ನು ಬಿಟ್ಟು ಸ್ವಾತಂತ್ರ್ಯ

ಸಂಗ್ರಾಮದಲ್ಲಿ ಧುಮುಕಿದರು. ಸಾವಿರಗಟ್ಟಲೆಯಲ್ಲಿ ತುರಂಗವಾಸ ಅನುಭವಿಸಿದರು. ಕೆಲವರು ಪ್ರಾಣಬಲಿಯಿತ್ತರು. ಮಹಾತ್ಮರ ನೇತೃತ್ವದಲ್ಲಿ ಹಿಂದೂ ಮುಸ್ಲಿಮರು ಸ್ವಲ್ಪ ಸಮಯ ಒಂದಾದರೂ ಮತ್ತೆ ಜಿನ್ನಾರವರ ಮಾತಿಗೆ ಕಿವಿಗೊಟ್ಟ ಮುಸ್ಲಿಮ್ ಲೀಗು ತನ್ನದೇ ಹಟ ಹಿಡಿದು ಮುಂಬರಿಯಿತು. ಬ್ರಿಟಿಷ್ ಸರಕಾರವು ಅವರಿಗೆ ಬೆಂಬಲಕೊಟ್ಟ ಕಾರಣ ಐಕ್ಯಸ್ಥಾಪನೆಯಾಗಲಿಲ್ಲ, ಸ್ವಾತಂತ್ರ್ಯವೂ ಸಿಕ್ಕಲಿಲ್ಲ. 1930ರಲ್ಲಿ ಮಹಾತ್ಮರು ಸತ್ಯಾಗ್ರಹದ ಚಳವಳಿಯನ್ನು ಹೂಡಿದರು, ದೇಶದಾದ್ಯಂತ ಎಂದೂ ಕಂಡುಕೇಳದ ರೀತಿಯ ಚಳವಳಿಯಾಯಿತು. ತಿರುಗಿ ಬಂಧನ, ಲಾಠಿ, ಗುಂಡುಗಳು. ಇದರೊಂದಿಗೆ ಬ್ರಿಟಿಷ್ ಸರಕಾರವು ಇನ್ನೊಂದು ಹಜ್ಜೆ ಮುಂದರಿದು ಮೂರು ನಾಲ್ಕು ವರ್ಷ ಚರ್ಚೆಯಲ್ಲೇ ಕಳೆದು 1935ರ ಸುಧಾರಣೆಗಳನ್ನು ಜ್ಯಾರಿಗೆ ತಂದಿತು. ಪ್ರಾಂತಗಳ ಆಡಳಿತೆಗಳನ್ನು ಅಲ್ಲಲ್ಲಿನ ಮಂತ್ರಿಮಂಡಳಗಳಿಗೊಪ್ಪಿಸುವ, ಕೇಂದ್ರ ಶಾಸನಸಭೆಯಲ್ಲಿ ಜನರಿಂದಾರಿಸಲ್ಪಟ್ಟವರ ಬಹುಮತವಿರುವ ಏರ್ಪಾಡುಗಳು ಇದರಿಂದಾದುವು. ಆದರೆ ಕೇಂದ್ರದ ಸರಕಾರ ಶಾಸನಸಭೆಗೆ ಜವಾಬ್ದಾರಿಯಾಗಿರಲಿಲ್ಲ.

1935ರ ಸುಧಾರಣೆಗಳಿಗೆ ಹೆಚ್ಚಿನವರ ಒಪ್ಪಿಗೆ ಇಲ್ಲದಿದ್ದರೂ ಚುನಾವಣೆಗಳಲ್ಲಿ ಕಾಂಗ್ರೆಸು ಸಹ ಭಾಗವಹಿಸಿ ಅನೇಕ ಪ್ರಾಂತಗಳಲ್ಲಿ 1937ರಲ್ಲಿ ಮಂತ್ರಿಮಂಡಲಗಳನ್ನು ರಚಿಸಿತು. 1939ರಲ್ಲಿ ಎರಡನೆಯ ಜಾಗತಿಕ ಯುದ್ಧಕ್ಕೆ ಭಾರತೀಯರೊಡನೆ ವಿಚಾರಿಸದೆ ಭಾರತವನ್ನೂ ಬ್ರಿಟಿಷ್ ಸರಕಾರವು ಎಳೆದುದನ್ನು ನಿಷೇಧಿಸಿ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜಿಯಿತ್ತವು. 1940ರಲ್ಲಿ ಮಹಾತ್ಮಾ ಗಾಂಧಿಯವರು ತಿರುಗಿ ವೈಯಕ್ತಿಕ ಸತ್ಯಾಗ್ರಹವನ್ನಾರಂಭಿಸಿದ ಅನಂತರ 1942ರಿಂದ ಬ್ರಿಟಿಷ್ ಸರಕಾರವು ಚರ್ಚೆಯಲ್ಲೇ ಕಾಲ ಕಳೆಯುತ್ತಿರುವುದನ್ನು ಕಂಡು 1947ರಲ್ಲಿ ಭಾರತದಿಂದ ಬ್ರಿಟಿಷರು ತೊಲಗಬೇಕೆಂಬ ಒತ್ತಾಯದ ಚಳವಳಿಯನ್ನಾರಂಭಿಸಿದರು. ಈ ಸಲ "ಮಾಡಿರಿ ಇಲ್ಲವೆ ಮಡಿಯಿರಿ" ಎಂಬ ಮಹಾತ್ಮರ ಘೋಷಣೆಯು ಪ್ರಚಾರವಾಗದಂತೆ ಬ್ರಿಟಿಷ್ ಸರಕಾರವು ಅವರನ್ನೂ ಇತರ ಸಾವಿರಾರು ಮುಖಂಡರನ್ನೂ ಜೈಲಿನಲ್ಲಿ

ಟ್ಟರೂ ಚಳವಳಿಯು ಉದ್ರೇಕಗೊಂಡು ಕೆಲವು ತಿಂಗಳು ಅಶಾಂತಿಯು ಎಲ್ಲೆಲ್ಲಿಯೂ ಹಬ್ಬಿತು.

1946ರಲ್ಲಿ ಬ್ರಿಟಿಷ್ ಸರಕಾರದ ಸೂತ್ರಗಳು ಲೇಬರ್ ಪಕ್ಷದ ಕೈಗೆಸಿಕ್ಕಿದಾಗ ಭಾರತಕ್ಕೆ ಸ್ವರಾಜ್ಯ ಕೊಡುವ, ಭಾರತ ಸಂವಿಧಾನವನ್ನು ಭಾರತೀಯರೇ ರೂಪಿಸಬೇಕೆನ್ನುವ ನಿಶ್ಚಯವು ಸಾರಲ್ಪಟ್ಟಿತು. ಮುಸ್ಲಿಮ್ ಲೀಗಿನ ಕಡೆಯ ಸದಸ್ಯರು ಘಟನಾ ಸಮಿತಿಯನ್ನು ಬಹಿಷ್ಕರಿಸಿದುದರಿಂದಲೂ ಪಂಜಾಬು, ಬಂಗಾಳ, ಬಿಹಾರ ಮೊದಲಾದ ಪ್ರದೇಶಗಳಲ್ಲಿ ಹಿಂದೂ ಮುಸ್ಲಿಮ್ ಜಗಳಗಳು ಯಾದವೀಕಲಹದ ರೂಪ ತಾಳಿದುದರಿಂದಲೂ ವಾಯುವ್ಯ ಪ್ರಾಂತ, ಬಲೂಚಿಸ್ತಾನ, ಸಿಂಧಪ್ರಾಂತ ಮತ್ತು ಪಂಜಾಬದ ಒಂದಂಶ ಪಶ್ಚಿಮ ಪಾಕಿಸ್ತಾನವೆಂದೂ ಬಂಗಾಳದ ಒಂದು ಭಾಗವು ಪೂರ್ವ ಪಾಕಿಸ್ತಾನವೆಂದೂ ಮುಸ್ಲಿಮರು ಬಹು ಸಂಖ್ಯಾಕರಿರುವ ಪ್ರದೇಶಗಳನ್ನು ಪಾಕಿಸ್ತಾನವೆಂಬ ಸ್ವತಂತ್ರ ಡೊಮಿನಿಯನೆಂದೂ ಉಳಿದ ಭಾರತವು ಇನ್ನೊಂದು ಡೊಮಿನಿಯನೆಂದೂ ವಿಭಾಗಿಸಲಿಕ್ಕೆ ಮುಖಂಡರು ಒಪ್ಪಿಗೆ ಇತ್ತರು. ಭಾತರವು ಡೊಮಿನಿಯನ್ ಎಂದರೆ ಬ್ರಿಟಷ್ ರಾಜ್ಯದೊಳಗಿನ ಸ್ವತಂತ್ರ ದೇಶವಾಗಿ 1947ನೇ ಅಗೋಸ್ತು 15ಕ್ಕೆ ಜನ್ಮ ತಾಳಿತು. 1946ರಲ್ಲಿ ಸಂವಿಧಾನ ರಚನೆಯ ಕೆಲಸ ಆರಂಭವಾದುದು 1949ನೇ ನವಂಬರ 6ಕ್ಕೆ ತನ್ನ ಕಾರ್ಯಕಲಾಪಗಳನ್ನು ಮುಗಿಸಿತು. 1950ನೇ ಜನವರಿ 26ಕ್ಕೆ ಭಾರತವು ಗಣರಾಜ್ಯವೆಂದು ಸಾರಲ್ಪಟ್ಟಿತು. ಅಂದಿನಿಂದ ಬ್ರಿಟಿಷರ ಅರಸು ನಮ್ಮ ಚಕ್ರವರ್ತಿಯೆಂದಿದ್ದುದು ಹೋಗಿ ನಮ್ಮ ರಾಷ್ಟ್ರಪತಿಯೇ ನಮ್ಮನ್ನಾಳುವಂತಾಯಿತು.

ನೂತನ ಸಂವಿಧಾನದಲ್ಲಿ ಹೇಳಿದ ಕ್ರಮದಲ್ಲಿ ಚುನಾವಣೆಗಳು ಮುಗಿದು 1952ರಲ್ಲಿ ಅದು ಪೂರ್ಣ ಆಚರಣೆಗೆ ಬಂದಿತು.

ನಮ್ಮ ಸಂವಿಧಾನದ ಮುಖ್ಯ ಲಕ್ಷಣಗಳು ಹೀಗಿವೆ. ಭಾರತವು ಸ್ವತಂತ್ರ ಗಣರಾಜ್ಯ. ಪ್ರತಿಯೊಬ್ಬ ಪ್ರಾಯಸ್ಥ (21 ವರ್ಷ ತುಂಬಿದ) ಪ್ರಜೆ (ಸ್ತ್ರೀ ಪುರುಷರೆಂಬ ಭೇದವಿಲ್ಲ) ಮತದಾರನು ಮತದಾರರು ತಂತಮ್ಮ ಪ್ರಾಂತದ ಶಾಸನಸಭಾಸದರನ್ನೂ ಕೇಂದ್ರದ ಪಾರ್ಲಿಮೆಂಟಿನ

ಜನತಾಸಭೆಗೂ ತಮ್ಮ ಪ್ರತಿನಿಧಿಗಳನ್ನೂ ಐದುವರ್ಷಕ್ಕೊಮ್ಮೆ ಆರಿಸುವರು. ಆರಿಸಲ್ಪಟ್ಟವರಲ್ಲಿ ಬಹುಮತ ಯಾವ ಪಕ್ಷದವರದೋ ಅವರ ನಾಯಕನು ಮುಖ್ಯಮಂತ್ರಿಯಾಗಿ ಅವನು ಆರಿಸಿದ ಇತರ ಸದಸ್ಯರು ಮಂತ್ರಿಗಳಾಗುವರು. ಪ್ರಾಂತದಲ್ಲಿ ತೆರಿಗೆ ಪಡೆಯಬೇಕಾದರೆ, ಹೆಚ್ಚಿಸಬೇಕಾದರೆ, ಖರ್ಚು ಮಾಡಬೇಕಾದರೆ, ನೂತನ ಶಾಸನ ಮಾಡಬೇಕಾದರೆ ಶಾಸನ ಸಭೆಯ ಒಪ್ಪಿಗೆ ಸಿಗಬೇಕು. ಮಂತ್ರಿಗಳಲ್ಲಿ ಅವಿಶ್ವಾಸದ ಠರಾವು ಅಂಗೀಕೃತವಾದರೆ ಅಥವಾ ಮಂತ್ರಿಗಳು ಮಂಡಿಸಿದ ವಿಧೇಯಕವನ್ನು ಶಾಸನ ಸಭೆ ತಳ್ಳಿಹಾಕಿದರೆ, ಮಂತ್ರಿಗಳು ರಾಜಿನಾಮೆ ಕೊಡಬೇಕು. ಕೇಂದ್ರದಲ್ಲಿಯೂ ಇದೇ ರೀತಿ.

ಕೇಂದ್ರ ಮತ್ತು ಪ್ರಾಂತದ ಅಧಿಕಾರಗಳಾವುವೆಂದು ವಿಂಗಡಿಸಲ್ಪಟ್ಟಿವೆ. ಸೈನ್ಯ, ಪರದೇಶಸಂಪರ್ಕ, ರೈಲು, ವಿಮಾನ, ಉಗಿಹಡಗು, ಪೋಸ್ಟು, ಟೆಲಿಗ್ರಾಫ್, ಟೆಲಿಫೋನ್, ಆಕಾಶವಾಣಿ, ಆದಾಯಕರ, ಆಮದು ತೆರಿಗೆ, ಕೈಗಾರಿಕೆಗಳ ತೆರಿಗೆ—ಇವೆಲ್ಲ ಕೇಂದ್ರದ ಕ್ಷೇತ್ರದಲ್ಲಿ. ಭೂಮಿಯ ತೆರಿಗೆ, ಭೂಧಾರಣೆಯ ಪದ್ಧತಿ, ಕೃಷಿ, ಆರೋಗ್ಯ, ವಿದ್ಯೆ, ನೆಲಮಾರ್ಗಗಳು—ಇವು ಪ್ರಾಂತಗಳ ಕ್ಷೇತ್ರದಲ್ಲಿ. ಸಿವಿಲ್ ಕಾನೂನು, ಕ್ರಿಮಿನಲ್ ಕಾನೂನು, ಕೈಗಾರಿಕೆ ಮೊದಲಾದವುಗಳಲ್ಲಿ ಕೇಂದ್ರದ ಶಾಸನಕ್ಕೆ ಅಡ್ಡಿಬಾರದಂಥ ಶಾಸನಗಳನ್ನು ಪ್ರಾಂತವು ಮಾಡಬಹುದು.

ಶಾಸನಸಭೆಗಳಿಗೆ ಉತ್ತರವಾದಿಯಾದ ಮಂತ್ರಿಮಂಡಳವೇ ಸರಕಾರ ನಡೆಸುವುದಾದರೂ ಸರಕಾರ ನಡೆಯುವುದು ರಾಷ್ಟ್ರಪತಿ ಮತ್ತು ಗವರ್ನರರ ಹೆಸರಲ್ಲಿ. ರಾಷ್ಟ್ರಪತಿಯನ್ನು ಐದು ವರ್ಷಕ್ಕೊಮ್ಮೆ ಪಾರ್ಲಿಮೆಂಟಿನ ಮತ್ತು ಪ್ರಾಂತ ಶಾಸನಸಭೆಗಳ ಸದಸ್ಯರು ಆರಿಸುವರು. ಗವರ್ನರರು ಕೇಂದ್ರ ಮಂತ್ರಿಮಂಡಳದಿಂದ ಆರಿಸಲ್ಪಟ್ಟು ರಾಷ್ಟ್ರಪತಿಯಿಂದ ನೇಮಿಸಲ್ಪಡುವರು. ಹಿಂದೆ ದೇಶೀ ಸಂಸ್ಥಾನಗಳೆಂದಿದ್ದ ಭಾಗಗಳು ಸಹ ಪ್ರಾಂತಗಳ ಸ್ಥಾನದಲ್ಲಿವೆ; ಆದರೆ ಅಲ್ಲಿ ಗವರ್ನರರ ಬದಲು ಹಿಂದಿನ ಅರಸುಮನೆತನದವರೇ ರಾಜಪ್ರಮುಖರೆಂಬ ಬಿರುದಿನಿಂದ ಗವರ್ನರರ ಅಧಿಕಾರ

ನಡೆಸುತ್ತಿದ್ದಾರೆ. ಶಾಸನಸಭೆಗಳು ಸಂವಿಧಾನಕ್ಕನುಗುಣವಾಗಿ ಶಾಸನ ಮಾಡುವಂತೆಯೂ ಶಾಸನಗಳನ್ನು ಪ್ರಜೆಗಳಿಗೆ ಅನ್ವಯಿಸುವಲ್ಲಿ ನಿಷ್ಪಕ್ಷಪಾತವಾಗುವಂತೆಯೂ ಸರಕಾರ ಮತ್ತು ಪ್ರಜೆ ಅಥವ ಪ್ರಜೆಗಳೊಳಗೆಯೇ ಇರುವ ವಾದಗಳನ್ನು ತೀರ್ಮಾನಿಸಲಿಕ್ಕೂ ಢಿಲ್ಲಿಯಲ್ಲಿ ಸುಪ್ರೀಮ್ ಕೋರ್ಟೂ, ಪ್ರಾಂತಗಳಲ್ಲಿ ಹಾಯರ್‌ಕೋರ್ಟುಗಳೂ ಅವುಗಳ ಕೆಳಗೆ ಜಿಲ್ಲಾ ಕೋರ್ಟುಗಳೂ ಮುನ್ಸಿಫ್, ಮೆಜಿಸ್ಟ್ರೇಟ್ ಕೋರ್ಟುಗಳೂ ಇವೆ.

ಚಿಕ್ಕ ಚಿಕ್ಕ ಗಣರಾಜ್ಯಗಳು ಪ್ರಾಚೀನ ಕಾಲದಲ್ಲಿದ್ದರೂ ಸಮಗ್ರ ಭಾರತವು ಒಂದು ಗಣರಾಜ್ಯದ ಛತ್ರದಡಿಯಲ್ಲಿ ಸೇರಿದುದು ಇದೇ ಮೊದಲು.

ಈಗಿನ ಜಗತ್ತಿನಲ್ಲಿ ಕೇಂದ್ರೀಕೃತ ಪ್ರಬಲ ಶಕ್ತಿಯಿಲ್ಲದಿದ್ದರೆ ಉಳಿಗಾಲವಿಲ್ಲ. ಭಾರತದ ಕೇಂದ್ರ ಸರಕಾರದ ಶಕ್ತಿ ಕುಗ್ಗದಂತೆ, ಆಯಾ ಸ್ಥಳದ ಮೇಲ್ವಿಚಾರ ಸ್ಥಳೀಯರಿಗೆ ಇರುವಂಥ ಹಿಂದಿನ ಉತ್ತಮ ಪದ್ಧತಿಯನ್ನು ರೂಪಿಸಿಕೊಟ್ಟರೆ, ಅತ್ತ ಸರ್ವಾಧಿಕಾರವೂ ಇತ್ತ ಅನಾಯಕತ್ವವೂ ಆಗದಂತಾಗುವುದು.



# ಸಂವಿಧಾನದ ಪೀಠಿಕೆ

**ಭಾರತದ ಜನರಾದ ನಾವು**

ಭಾರತವನ್ನು **ಸ್ವತಂತ್ರ ಪ್ರಜಾಯತ್ತ**
**ಗಣರಾಜ್ಯ**ವಾಗಿ ವಿಧಿಯುಕ್ತ ಸ್ಥಾಪಿಸುವ
ಗಂಭೀರ ನಿರ್ಣಯವನ್ನು ಮಾಡಿ, ಅದರ ಎಲ್ಲಾ
ಪ್ರಜೆಗಳಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ
**ನ್ಯಾಯ**ವನ್ನೂ ವಿಚಾರ, ಪ್ರಚಾರ, ಶ್ರದ್ಧೆ,
ವಿಶ್ವಾಸ ಮತ್ತು ಪೂಜಾ **ಸ್ವಾತಂತ್ರ್ಯ**ವನ್ನೂ
ಸ್ಥಾನ, ಸದವಕಾಶಗಳ **ಸಮಾನತೆ**ಯನ್ನೂ
ಒದಗಿಸಿ ಅವರೊಳಗೆ ವ್ಯಕ್ತಿ ಮಹತ್ವ
ಮತ್ತು ಜನಾಂಗದ ಐಕ್ಯವಿರುವ
**ಬಾಂಧವ್ಯ**ವನ್ನು ಸ್ಥಿರಪಡಿಸಲಿಕ್ಕೆಂದು
ನಮ್ಮ ರಾಜ್ಯವ್ಯವಸ್ಥಾಸಭೆಯಲ್ಲಿ ಇದೇ
1949ನೇ ನವಂಬರ 6ನೇ ದಿನ
ಸಂವಿಧಾನವನ್ನು ಅಂಗೀಕರಿಸಿ,
ವಿಧಿಸಿ, ನಮಗೆ ನಾವೇ
ಅರ್ಪಿಸಿದ್ದೇವೆ.

# ೧೦. ಭವಿಷ್ಯ ದರ್ಶನ

ಭಾರತದ ಇತಿಹಾಸ, ಜನಸಂಪತ್ತು, ನಿಸರ್ಗಸಂಪತ್ತು, ಕಲಾ ವೈಭವ, ಧಾರ್ಮಿಕ ಜೀವನಗಳ ಸಿಂಹಾವಲೋಕನದಿಂದ ಸ್ಫೂರ್ತಿಗೊಂಡ ತರುಣ ತರುಣಿಯರು ಭಾರತವು ಇಂದಿನ ಜಗತ್ತಿನಲ್ಲಿ ಇತರ ಪ್ರತಿಭಾ ಸಂಪನ್ನ ರಾಷ್ಟ್ರಗಳ ಸರಿಸಮಾನವಾಗುವಂತೆ ಯತ್ನಿಸಬೇಕಲ್ಲವೇ? ನಾವು ಸ್ವತಂತ್ರರಿದ್ದೇವೆ, ನಮ್ಮ ಹಿರಿಯರ ಹಿರಿಮೆಯನ್ನು ಎಷ್ಟು ಹೊಗಳಿದರೂ ಸಾಲದು ಎಂದು ಬರೀ ಗತವೈಭವವನ್ನೇ ನೆನೆಸುತ್ತಿರುವವರು ಠಾಕೂರರ "ನಯಂಜೋರಿನ ಬಾಬು" ಎಂಬ ಕಥೆಯಲ್ಲಿ ಚಿತ್ರಿಸಿದ ಜಮೀನ್ದಾರನು ತನ್ನ ಹಿರಿಯರ ಜಮೀನಿನ ವರ್ಣನೆಯಲ್ಲೇ ಇದ್ದು ತಾನು ಚಿಕ್ಕಾಸೂ ಇಲ್ಲದ ಸ್ಥಿತಿಯಲ್ಲಿದ್ದೇನೆಂಬುದನ್ನು ಮರೆತಂತಾಗುವುದು. ಗ್ರೀಕರ ತತ್ವ ಜ್ಞಾನಿ ಪ್ಲೆಟೋ ಹೇಳಿದಂತೆ ಪ್ರಜೆಗಳು ಸದಾಕಾಲ ಜಾಗೃತರಾಗಿದ್ದರೆ ಮಾತ್ರ ಸ್ವತಂತ್ರರಾಗಿ ಉಳಿದಾರು, ಅಷ್ಟು ಬೆಲೆ ಕೊಡದ ಸ್ವಾತಂತ್ರ್ಯ ಬಾಳಿ ಉಳಿಯದು.

ನಮ್ಮ ಸ್ವಾತಂತ್ರ್ಯವು ಸದಾಕಾಲ ಬಾಳಬೇಕಾದರೆ, ನಮ್ಮ ಜನಾಂಗವು ಪ್ರತಿಷ್ಠೆಯುಳ್ಳ ಜನಾಂಗಗಳಲ್ಲೊಂದೆಂದು ಸ್ಥಾನಪಡೆಯ ಬೇಕಾದರೆ, ನಾವು ಮೂರು ರೀತಿಯ ಕೆಲಸಗಳನ್ನು ಕೈಗೊಳ್ಳಬೇಕಾಗುವುದು. ನಮ್ಮ ಕಾರ್ಯಕ್ರಮವು ಹಿಂದೂಗಳು ನವರಾತ್ರಿಯಲ್ಲಿ ವಿಜಯ ಯಾತ್ರೆಗೆ ಹೊರಡುವ ಮೊದಲು ವಿನಾಶಕಾರಿಣೀ ಮಹಾಕಾಳಿಯನ್ನೂ ಐಹಿಕ ಸಂಪತ್ತನ್ನೀಯುವ ಮಹಾಲಕ್ಷ್ಮಿಯನ್ನೂ ಕಲೆ, ಜ್ಞಾನ, ವಿಜ್ಞಾನಗಳ ಅಧಿದೇವಿಯಾದ ಮಹಾಸರಸ್ವತಿಯನ್ನೂ ಪೂಜಿಸುವಂತೆ ನಮ್ಮಲ್ಲಿರುವ ನ್ಯೂನತೆಗಳೂ ದೋಷಗಳೂ ಪ್ರಾಚೀನ ಕಾಲದಿಂದ ಇದ್ದಂಥವಾದರೂ ಅವನ್ನು ನಾಶಗೊಳಿಸಬೇಕು; ದೇಶದ ಆರ್ಥಿಕ ಸಂಪತ್ತನ್ನು ವರ್ಧಿಸಬೇಕು ಮತ್ತು ಆರ್ಥಿಕ ಸಂಪತ್ತಿನಿಂದಲೇ ತೃಪ್ತರಾಗದೆ ಜನರಲ್ಲಿ ವಿದ್ಯೆ, ವಿಚಾರ, ಜ್ಞಾನ, ಕಲಾಭಿರುಚಿಗಳೂ ಧಾರ್ಮಿಕ ಜೀವನವೂ ಬೆಳೆಯುವಂತೆ ಪ್ರಯತ್ನಿಸಬೇಕು.

ಜಾತಿಭೇದ, ಮತಭೇದಗಳನ್ನು ಸಾರ್ವಜನಿಕ ಕ್ಷೇತ್ರದಲ್ಲಿಯೂ ಸರಕಾರ, ಆಡಳಿತೆಗಳಲ್ಲೂ ಬೆರಸಿ ಅಸೂಯೆ, ದ್ವೇಷಗಳು ಬೆಳೆದು ಜನಾಂಗದ ಐಕ್ಯವು ಭೇದಿಸಲ್ಪಟ್ಟು ಚೂರುಚೂರಾಗುವಂತೆ ಮಾಡಿದೆವು. ಮಹಾರಾಷ್ಟ್ರದ ಪೇಶ್ವೆಯರ ಆಡಳಿತೆಯ ಕಾಲದಲ್ಲಿ ಅವರ ಅಧಿಕಾರಿಗಳಲ್ಲಿ ಇವನು ದೇಶಸ್ಥ ಅವನು ಕೊಂಕಣಸ್ಥನೆಂಬ ಮತ್ಸರ ಹೆಚ್ಚಾದುದು ಪೇಶ್ವೆಯವರ ಅಧಃಪತನಕ್ಕೊಂದು ಬಲವಾದ ಕಾರಣವೆಂದು ಪ್ರಸಿದ್ಧ ಇತಿಹಾಸಜ್ಞರಾದ ಜದುನಾಥ ಸರ್ಕಾರರು ಅಭಿಪ್ರಾಯ ಪಟ್ಟಿದ್ದಾರೆ. ನಮ್ಮಲ್ಲಿ ಒಡಕಿದ್ದು ಸಹ ಸ್ವತಂತ್ರರಾಗಿದ್ದ ಕಾಲವಿತ್ತು, ಸರಿ. ಆದರೆ ಠಾಕೂರರೊಂದುಕಡೆ ಕೊಟ್ಟ ಉಪಮೆಯಂತೆ ದಡದಲ್ಲಿರುವ ದೋಣಿಗೆ ಎಷ್ಟೇ ರಂಧ್ರಗಳಿದ್ದರೂ ಗಾಬರಿಯಿಲ್ಲ, ನೀರಲ್ಲಿಳಿದು ತೆರೆ, ಗಾಳಿಗಳನ್ನೆದುರಿಸುವಾಗ ಮಾತ್ರ ಗಂಡಾಂತರಕ್ಕೆ ಕಾರಣವಾಗುವುವು. ಈಗಿನ ಜಗತ್ತಿನಲ್ಲಿ ಯಾವ ಜನಾಂಗವೂ ತನ್ನ ಮೂಲೆಯಲ್ಲಿ ತಾನಿರುವೆನೆಂದರೆ ಇತರರು ಬಿಡರು. ಅನೈಕ್ಯವಿದ್ದ ಜನರಲ್ಲಿ ಪಂಚಮದಳವನ್ನು ಸ್ಥಾಪಿಸುವುದು ವೈರಿಗಳಿಗೆ ಸುಲಭವಾಗುವುದಿಲ್ಲವೇ? ಇದನ್ನರಿತುಕೊಂಡೇ ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತಾ ನಿವಾರಣೆ, ಹಿಂದೂ ಮುಸ್ಲಿಮರೊಳಗೆ ಸೌಹಾರ್ದಗಳಿಂದಲೇ ಸ್ವರಾಜ್ಯ ಸಾಧ್ಯವೆಂದು ಸಾರಿದ್ದರು.

ಈಗಲೂ ಜಾತೀಯತೆಯ ವಿಷಬೀಜಗಳು ನಮ್ಮಲ್ಲಿ ಧಾರಾಳ ಇವೆ. ಅವನ್ನು ನಿರ್ನಾಮ ಮಾಡುವುದು ಅತ್ಯಗತ್ಯ. ಹಾಗೆಂದು ಜಾತಿಭೇದ, ಮತಭೇದಗಳನ್ನು ಸಂಪೂರ್ಣ ಅಳಿಸಿ ಒಂದೇ ಜಾತಿ, ಒಂದೇ ಮತವನ್ನು ಭಾರತದಲ್ಲಿ ಸ್ಥಾಪಿಸುವುದು ಸಾಧ್ಯವೂ ಅಲ್ಲ, ಅಗತ್ಯವೂ ಅಲ್ಲ. ಬ್ರಿಟನಿನಲ್ಲಿ ಪ್ರೊಟೆಸ್ಟೆಂಟರೂ ಕೆಥೋಲಿಕರೂ ಯೆಹೂದ್ಯರೂ ಇರುವಂತೆ ಯುರೋಪಿನ ಇತರ ದೇಶಗಳಲ್ಲೂ ಇದ್ದಾರೆ, ಅಮೇರಿಕದಲ್ಲೂ ಇದ್ದಾರೆ. ಚೀನಾ, ಸಿಂಹಳ, ಬರ್ಮಾಗಳಲ್ಲಿ ಬೌದ್ಧರೂ ಕ್ರೈಸ್ತರೂ ಮುಸ್ಲಿಮರೂ ಇದ್ದಾರೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಆದರೆ ಅಲ್ಲಿನವರಿಗೂ ನಮಗೂ ವ್ಯತ್ಯಾಸವಿಷ್ಟೆ. ಸಾರ್ವಜನಿಕ ಜೀವನದಲ್ಲಿ ಜಾತಿಮತಗಳಿಗೆ ಗಮನಕೊಡದೇ ಅವರು ಐಕಮತ್ಯದಿಂದಿದ್ದಾರೆ, ನಮ್ಮಲ್ಲಿ ಆ ಪ್ರಶ್ನೆ ಆಗಾಗ ತಲೆಯೆತ್ತಿ ಅನೈಕ್ಯಕ್ಕೆ ಕಾರಣ

ವಾಗುತ್ತದೆ. ಇನ್ನಾದರೂ ವಿದ್ಯಾಲಯಗಳಲ್ಲಿ, ವಿದ್ಯಾರ್ಥಿ ನಿಲಯಗಳಲ್ಲಿ ಸಕಲ ಮತ, ಜಾತಿಯವರೂ ಸೇರಿ ಕಲಿಯುವಂತೆ ಮಾಡಿದರೆ ಮುಂದಿನ ಜನಾಂಗದಲ್ಲಾದರೂ ಭೇದಭಾವನೆ ಕಡಿಮೆಯಾದೀತು. ಸಹಕಾರಿ ಸಂಸ್ಥೆಗಳನ್ನು ರಚಿಸುವಾಗಲೂ ಪಂಚಾಯತು, ನಗರಸಭೆ, ಜಿಲ್ಲಾ ಬೋರ್ಡು, ಶಾಸನಸಭೆಗಳಿಗೆ ಪ್ರತಿನಿಧಿಗಳನ್ನಾರಿಸುವಾಗಲೂ ಜಾತಿ, ಮತಗಳ ಪ್ರಶ್ನೆ ಎದ್ದು ಬರುತ್ತಿದೆ. ಇದನ್ನಡಗಿಸದೆ ಸಾರ್ವಜನಿಕ ಕ್ಷೇತ್ರದಲ್ಲಿ ಜಾತಿ, ಮತಗಳ ಭೇದಭಾವಗಳ ತಲೆಯೆತ್ತದಂತಾಗದೆ ಏನು ಸುಖವಾದೀತು?

ಪ್ರಾರಬ್ಧ, ಹಣೆಬರಹ, ದೈವೇಚ್ಛೆ ಎಂಬ ನೆಪ ಹೇಳಿ ತಂತಮ್ಮ ಕರ್ತವ್ಯ ಮಾಡದೆ, ಎಡರು ತೊಡರುಗಳಿಗೆ ಬೆದರಿ ಕಷ್ಟಗಳನ್ನನುಭವಿಸುವ ಮಾನಸಿಕತೆಯ ಜನರು ನಮ್ಮಲ್ಲಿದ್ದಷ್ಟು ಪಾಶ್ಚಾತ್ಯರಲ್ಲಿಲ್ಲ. ಗೆದ್ದರೆ ಭೂಮಿ, ಸತ್ತರೆ ಸ್ವರ್ಗವೆಂದು ಹಿರಿಯರು ಹೇಳಿದ ಮಾತುಗಳನ್ನು ಮರೆತು ಪೌರುಷವಿಲ್ಲದವರಾಗಿ ಬಾಳಿದರೆ ಏನೂ ಸಾಧಿಸಲು ಸಾಧ್ಯವಿಲ್ಲ. ಮನುಷ್ಯ ಯತ್ನವಿದ್ದಲ್ಲಿ ದೈವಬಲವಿದೆಯೆಂದು ನಂಬಿಯೇ ಮುಂದಡಿಯಿಡಬೇಕು. ಕಟ್ಟಡವಿಗಳ ನಡುವೆ, ಅಸಾಧ್ಯ ಗಿರಿಶಿಖರಗಳಲ್ಲಿ, ಹಿಮಾಲಯದ ಶೃಂಗಗಳಲ್ಲಿ ಸಹ ದೇವಸ್ಥಾನಗಳನ್ನು ಕಟ್ಟಿ ಯಾತ್ರೆಗೆ ಹೋದವರ ಸಾಹಸವನ್ನು ಮರೆತು ಕೈಲಾಸಾರೋಹಣವೇ ಮೊದಲಾದ ಸಾಹಸಕಾರ್ಯಗಳನ್ನು ಪರಕೀಯರು ಕೈಗೊಳ್ಳುವುದನ್ನು ಕಂಡು ಬೆರಗಾಗಿ ಸುಮ್ಮನಿರುವುದು ಉಚಿತವೇ?

ಜೈನ, ಬೌದ್ಧಧರ್ಮಗಳು ಅಹಿಂಸಾವಾದಕ್ಕೆ ಮಹತ್ವಕೊಟ್ಟು ಭಾರತೀಯರನ್ನು ಹೇಡಿಗಳಾಗಿ ಮಾಡಿದುವೆಂದು ಅಭಿಪ್ರಾಯ ಪಡುವವರಿದ್ದಾರೆ; ಅಂಥವರು ಮಹಾತ್ಮಾ ಗಾಂಧಿಯವರು ಅಹಿಂಸೆಯನ್ನು ಬೋಧಿಸಿ ನಮ್ಮನ್ನು ಇನ್ನೂ ಹಾಳುಮಾಡಿದರೆಂದು ಹೇಳುವುದೂ ಇದೆ. ಅಹಿಂಸಾವಾದದಿಂದ ಭಾರತೀಯರು ಹೇಡಿಗಳಾದರೆಂದು ಚರಿತ್ರೆಯ ಪಾಠದಿಂದ ತಿಳಿದುಬರುವುದಿಲ್ಲ. ಪರದೇಶಗಳಿಂದ ಯೋಧರು ಬಂದು ನೆಲೆಸಿದ ನಿದರ್ಶನಗಳು ಬೌದ್ಧಧರ್ಮದ ಮೊದಲೂ ಆಗಿವೆ, ಅನಂತರವೂ ಆಗಿವೆ. ಬೌದ್ಧಧರ್ಮದ ಪ್ರಾಬಲ್ಯ ಹೋಗಿ ಗುಪ್ತರ ಕಾಲದಲ್ಲಿ ಹಿಂದೂ

ಧರ್ಮವು ಎಲ್ಲೆಲ್ಲಿಯೂ ಬಹುಜನರ ಮತವಾದ ಅನಂತರ ಹೂಣರು ಬಂದು ರಾಜ್ಯಗಳನ್ನು ಗೆದ್ದಿಲ್ಲವೇ? ಅಫ್ಘಾನರು, ಮೊಗಲರು, ಬ್ರಿಟಿಷರು ಬಂದಾಗ ಬೌದ್ಧಧರ್ಮವೆಲ್ಲಿತ್ತು? ಮಹಾತ್ಮಾ ಗಾಂಧಿಯವರು ಹಿಂಸೆಯನ್ನು ಅಹಿಂಸೆಯಿಂದ ಎದುರಿಸುವುದು ಉತ್ತಮವೆಂದು ಹೇಳಿದರೂ ಹೇಡಿಯಾಗಿ ಬಗ್ಗುವುದಕ್ಕಿಂತ ಹಿಂಸೆಯನ್ನು ಹಿಂಸೆಯಿಂದ ಎದುರಿಸುವುದಾದರೂ ಲೇಸೆಂದು ಸ್ಪಷ್ಟವಾಗಿ ಬೋಧಿಸಿದ್ದಾರೆ. ಅಹಿಂಸೆಯೆಂದರೆ ಹೇಡಿಗಳ ಸೋಗಾಗದ ರೀತಿಯಲ್ಲಿ ನಮ್ಮ ವರ್ತನೆಯಿರಬೇಕು.

ಪ್ರತಿಯೊಬ್ಬರೂ ತಮಗೆ ಹಿತತೋರಿದಂತೆ ವರ್ತಿಸಲಿ ಎಂಬ ಮನೋವೃತ್ತಿಯು ವಿಪರೀತಕ್ಕೆ ಹೋಗಿ ಸಾಂಘಿಕ ಕಾರ್ಯಗಳಿಗೆ, ಸಹಕಾರಕ್ಕೆ ಬೇಕಾದ ಸಂಯಮವು ಸಾಕಷ್ಟಿಲ್ಲವಾಗಿದೆ. ಆಜ್ಞಾಧಾರಕ ಯೋಧರಾಗಿರಲು ಕಲಿತವರೇ ಮುಂದೆ ಸೇನಾನಿಗಳಾಗುವರೆಂಬುದನ್ನು ಮರೆತಂತಾಗಿದೆ. ಅಲ್ಲದೆ, ನಮ್ಮ ನಮ್ಮ ಮಡಿವೈಲಿಗೆಗಳ ಯೋಚನೆ ಮಾಡುತ್ತಿದ್ದೂ ಸಮಾಜದ ಮಡಿವೈಲಿಗೆಗಳನ್ನು ಮರೆತಿದ್ದೇವೆ; ತಮ್ಮ ಮನೆಯಂಗಳ ಚೊಕ್ಕವಿಡಬೇಕೆಂದು ಅಲ್ಲಿನ ಕಸಕಡ್ಡಿಗಳನ್ನು ಬೀದಿಗೆ ಎಸೆಯುವವರೇ ಹೆಚ್ಚಾಗಿದ್ದಾರೆ.

ಸ್ಥಳೀಯ ಶಾಸನ ಅಲ್ಲಲ್ಲಿನ ಜನರ ಕೈಯಲಿದ್ದದ್ದು ಗ್ರಾಮ ಹಿತಕ್ಕಾದರೂ ಅದರಿಂದ ಜನತೆಯು ಅರಸು ಯಾರಾದರೇನೆಂದು ಅಲಕ್ಷಿಸಿ ದೇಶಸ್ವಾತಂತ್ರ್ಯದ ರಕ್ಷಣೆಗೆ ಗಮನ ಕೊಡಲಿಲ್ಲ. ವೃತ್ತಿ ಭೇದಗಳು ಹುಟ್ಟಿನ ಮೇಲೆ ಆಧರಿಸಿ ನಿಶ್ಚಯಿಸಿದುದರ ಫಲವಾಗಿ ಯುದ್ಧ ಮಾಡುವ ಜಾತಿ, ಆಳುವ ಜಾತಿಭೇದಗಳೆಂಬ ಜಾತಿಗಳಾಗಿ ಅವರ ಸೋಲು ಗೆಲವುಗಳು ಜನತೆಯ ಸೋಲು ಗೆಲವುಗಳೆಂದಾಗದೆ ಹೋಯಿತು. ಅದರಿಂದಾಂಗಿ ಜನಾಂಗ ಪ್ರೇಮವಿಲ್ಲದಾಯಿತು.

ಕೈ ಕಸಬು ಕೆಲವು ಜಾತಿಯವರದು, ಮಿದುಳಿನ ಉಪಯೋಗ ಮಾಡುವವರು ಬೇರೆ ಎಂದಾಗಿ ಮಿದುಳಿಗೆ ಕೈಇಲ್ಲದ, ಕೈಗೆ ಮಿದುಳಿಲ್ಲದ ತುಂಡುಗಳಾಗಿ, ಒಂದಕ್ಕೆ ಚಕ್ರವಿದ್ದರೆ ಎತ್ತುಗಳಿಲ್ಲ ಇನ್ನೊಂದಕ್ಕೆ ಎತ್ತುಗಳಿದ್ದರೆ ಚಕ್ರವಿಲ್ಲ ಎಂದಾಗಿ ಎರಡೂ ಗಾಡಿಗಳು ನಿಂತುಬಿಡುವಂತೆ ಸಮಾಜದ ಪ್ರಗತಿಯು ನಿಂತೇ ಹೋಯಿತು.

ಭವ್ಯಭಾರತದ ನಿರ್ಮಾಪಕರು ಮೊದಲಾಗಿ ಈ ಶೃಂಖಲೆಗಳನ್ನು ಕಡಿದು ಭಾರತೀಯರ ವಿಚಾರ, ವರ್ತನೆಗಳು ಸರಿದಾರಿಯಲ್ಲಿ ಮುಂದರಿಯುವಂತೆ ಮಾಡುವುದು ಪ್ರಥಮ ಕರ್ತವ್ಯವನ್ನಾಗಿ ತಿಳಿಯಬೇಕು.

ಜನಾಂಗ ವೃಕ್ಷದ, ಹಣ್ಣಾಗಿ ಒಣಗಿದ ಎಲೆಗಳನ್ನುದುರಿಸಿ, ಸತ್ತ ರೆಂಬೆಗಳನ್ನು ಕಡಿದು, ನವಜೀವನವು ಅಂಕುರಿಸುವಂತೆ ಮಾಡಿದರೆ ಸಂಪತ್ಫಲಾಭಿವೃದ್ಧಿಯಾಗುವುದು. ಭಾರತೀಯರಲ್ಲಿ ನೂರಕ್ಕೆ ಎಂಬತ್ತು ಮಂದಿ ಹಳ್ಳಿಗಳಲ್ಲಿದ್ದು ಕೃಷಿಯನ್ನೇ ಮುಖ್ಯ ವೃತ್ತಿಯಾಗಿಟ್ಟುಕೊಂಡಿರುವುದರಿಂದ ಹಳ್ಳಿಗಳ ಆರೋಗ್ಯ, ಹಳ್ಳಿಗಳಲ್ಲಿ ಶಾಲೆಗಳು, ಹಳ್ಳಿಗಳಿಗೆ ಮಾರ್ಗ ಸೌಕರ್ಯ ಮತ್ತು ವೈದ್ಯಸಹಾಯ—ಇವು ಹೆಚ್ಚಾಗುವಂತೆ ಮಾಡಬೇಕು. ಬೀಜಗಳ ಆರಿಸುವಿಕೆಯಲ್ಲಿ ಹೊಲಗಳನ್ನು ಹಸನು ಮಾಡಿ ಸಾರಭರಿತವಾಗಿ ಮಾಡುವುದರಲ್ಲಿ ಯೋಗ್ಯ ಸಲಹೆಗಳನ್ನು ಪ್ರಯೋಗ, ಪ್ರದರ್ಶನಗಳಿಂದಲೇ ಕಲಿಸಿದರೆ ನಮ್ಮ ಆಹಾರ ಸಮಸ್ಯೆಯೂ ಪೂರ್ತಿಯಾಗುವುದು, ಜನರ ಸಂಪತ್ತೂ ಹೆಚ್ಚುವುದು. ಜನರ ಸಂಪತ್ತು ಹೆಚ್ಚಿದರೆ ಸುಲಭದಲ್ಲಿ ಸರಕಾರವೂ ಸ್ಥಳೀಯ ಸಂಸ್ಥೆಗಳೂ ಹೆಚ್ಚು ತೆರಿಗೆಗಳನ್ನು ಪಡೆದು ಸಾರ್ವಜನಿಕರ ಸೌಕರ್ಯವನ್ನು ಇನ್ನಷ್ಟು ಹೆಚ್ಚಿಸಬಹುದು.

ಕೃಷಿಯನ್ನೇ ನಂಬಿಕೊಂಡಿರುವವರ ಸಂಖ್ಯೆ ಹೆಚ್ಚಾಗದಂತೆಯೂ ಆರ್ಥಿಕ ಪಾರತಂತ್ರ್ಯವನ್ನು ನೀಗಿಸಲಿಕ್ಕೂ ಚಿಕ್ಕದೊಡ್ಡ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಟ್ಟರೆ ಈಗಿನಂತೆ ಸೂಜಿಯಿಂದ ಹಿಡಿದು ವಿಮಾನದವರೆಗೆ ಪ್ರತಿಯೊಂದಕ್ಕೂ ಪರದೇಶಗಳನ್ನು ನಂಬಿರುವ ಸ್ಥಿತಿಯು ಹೋಗಿ ಸ್ವಾವಲಂಬಿಗಳಾಗುವುದು ಹೆಚ್ಚಿನ ಮಟ್ಟಿಗೆ ಸಾಧ್ಯವಿದೆ. ಜಪಾನಿನಂತೆ ಭಾರತೀಯರೂ ಯಂತ್ರವಿದ್ಯೆಯಲ್ಲೂ ಆಧುನಿಕವಾದ ಕೈಗಾರಿಕೆಗಳಲ್ಲೂ ಕ್ಷಿಪ್ರದಲ್ಲೇ ಪ್ರಗತಿ ಹೊಂದಬೇಕಾದರೆ ಜನರಲ್ಲಿ ತಿರುಗಿ ಸ್ವದೇಶೀ ಭಾವನೆ ಬೆಳೆಯಬೇಕು. 1905ರಿಂದ ನಮ್ಮ ಮುಂದಾಳುಗಳು ಬೋಧಿಸಿ ಬಂದ ಮಂತ್ರವನ್ನು ಸ್ವಾತಂತ್ರ್ಯ ಸಿಕ್ಕಿದೊಡನೆ (ಆಹಾರದ ತೀವ್ರ ಅಭಾವದಿಂದಿರಬಹುದು) ಜನರು ಮರೆತು ತಿರುಗಿ ವಿದೇಶೀ ಉತ್ಪಾದನೆಗಳ ಮೇಲೆಯೇ ಆದರಿಸಿಕೊಂಡಿದ್ದಾರೆ.

ಜನರು ನಮ್ಮ ಆರ್ಥಿಕ ಸ್ಥಿತಿಯನ್ನು ಇತರ ದೇಶಗಳವರ ಸ್ಥಿತಿಯೊಡನೆ ಹೋಲಿಸಿ ನಮ್ಮ ಉನ್ನತಿಗೆಂದಿರುವ ಉತ್ತಮವಾದ ಸಲಹೆಗಳನ್ನು ತಿಳಿದುಕೊಳ್ಳಬೇಕಾದರೂ ಪ್ರತಿನಿಧಿಗಳನ್ನಾರಿಸುವಾಗ ಯೋಗ್ಯರನ್ನು ಆರಿಸಬೇಕಾದರೂ ಜನರಲ್ಲಿ ವಿದ್ಯೆಯು ಈಗಿನ ಹತ್ತುಪಾಲು ಹರಡಬೇಕು. ತಿಳಿಯುವ ಶಕ್ತಿಕೊಡುವ ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸವನ್ನು ಹಲವರಿಗೆ ಕೊಡುತ್ತಿರುವಾಗಲೇ ಅವರಿಗೆ ತಿಳಿಸುವ, ಸಮಾಜವನ್ನು ಮುನ್ನಡೆಸುವ, ಸಾಮರ್ಥ್ಯವನ್ನು ಕಾಲೇಜು, ವಿಶ್ವವಿದ್ಯಾಲಯಗಳು ಕೆಲವರಿಗಾದರೂ ಕೊಡುತ್ತಿರುವುದು ಅಗತ್ಯ; ಸೇನಾನಿಯಿಲ್ಲದ ಸೇನೆಯಿಂದ ಹಾನಿ ಹೆಚ್ಚು, ಪ್ರಯೋಜನವೇನೂ ಇಲ್ಲ.

ವಿದ್ಯಾಭ್ಯಾಸವೆಂದರೆ ಬರೀ ಹಣಗಳಿಸುವ ವಿಧಾನಕ್ಕೆ ಮಾತ್ರ ಪ್ರಾಶಸ್ತ್ಯಕೊಡದೆ ಶೀಲ, ಸಂಯಮ, ಸಹಕಾರೀ ಮನೋವೃತ್ತಿಗಳನ್ನೂ ಬೆಳೆಸಬೇಕು. ಉತ್ತಮ ರೀತಿಯ ಸಾಹಿತ್ಯ, ಸಂಗೀತ, ಶಿಲ್ಪ, ಚಿತ್ರ, ನಾಟಕಾದಿ ಕಲೆಗಳಲ್ಲಿ ಅಭಿರುಚಿ ಹೆಚ್ಚಾಗುವಂತೆ ಪ್ರತಿಯೊಬ್ಬರೂ ಸಾಹಿತ್ಯ ಮತ್ತಿತರ ಕಲೆಗಳನ್ನು ತಂತಮ್ಮ ಶಕ್ತ್ಯನುಸಾರವಾಗಿ ಪ್ರೋತ್ಸಾಹಿಸುವುದು ಅಗತ್ಯವೆಂದು ತಿಳಿದು ಸಮಾಜದಲ್ಲಿ ಸಂಸ್ಕೃತಿಯು ಹೆಚ್ಚುತ್ತ ಬಂದರೆ ಮಾತ್ರ ನಮ್ಮ ಘನತೆ ಹೆಚ್ಚುವುದು.

ಆಂತರಿಕ ಪರಿಸ್ಥಿತಿಯನ್ನು ಸುಧಾರಿಸುವಾಗ ದೇಶರಕ್ಷಣೆಯ ಕಾರ್ಯವನ್ನು ಮರೆತರೆ, ಉತ್ತಮವಿಧದ ಗಿಡಬಳ್ಳಿಗಳನ್ನು ನೆಡುವುದರಲ್ಲೇ ಮಗ್ನನಾಗಿದ್ದ ತೋಟಗಾರನು ನೆರೆಮನೆಯ ಆಡು ಬಂದು ಕ್ಷಣದಲ್ಲಿ ಎಲ್ಲವನ್ನೂ ನುಂಗದಂತೆ ಭದ್ರವಾದ ಬೇಲಿಹಾಕದೆ ಅಜಾಗ್ರತೆ ಮಾಡಿದಂತಾಗುವುದು. ಪರರ ಆಳಿಕೆಯ ಕಾಲದಲ್ಲಿ ನಮ್ಮಲ್ಲಿ ಯಾರೂ ಸೇನಾನಿಗಳಾಗಲಿಕ್ಕೆ ಅಯೋಗ್ಯರೆಂದೂ ಸೈನಿಕರಾಗಲಿಕ್ಕೆ ಕೆಲವೇ ಮಂದಿ ಮಾತ್ರ ಯೋಗ್ಯರೆಂದೂ ನಮ್ಮ ಕಿವಿಯಲ್ಲಿ ಊದಿಯೂದಿ ನಮ್ಮಲ್ಲಿ ಕ್ಷಾತ್ರತೇಜವಿಲ್ಲದಂತಾಗಿದೆ. ಶಾಲಾ ಕಾಲೇಜುಗಳಲ್ಲಿ ನೆಶನಲ್ ಕೆಡೆಟ್‌ಕೋರುಗಳಿಗೆ ಸೇರಿ ಪುರಜನರ ಸೇನೆಯಲ್ಲೂ ಸೇರಿಕೊಂಡು ದೇಶ ರಕ್ಷಣೆಗೆ ವಿಪತ್ತೊದಗಿದಾಗ ಪ್ರತಿಯೊಬ್ಬರೂ ರಣರಂಗಕ್ಕಿಳಿಯುವ ಧೈರ್ಯ ತೋರಿಸಿದರೆ ಮಾತ್ರ, ಭದ್ರತೆಯೂ ಶಾಂತಿಯೂ ಸ್ಥಿರವಾಗುವುವು.

ಭಾರತದ ಸೇನಾಬಲವು ಹಿಂದೆಂದೂ ಪರದೇಶಗಳ ಆಕ್ರಮಣಕ್ಕೆ ಭಾರತೀಯರಿಂದ ಉಪಯೋಗಿಸಲ್ಪಟ್ಟದ್ದಿಲ್ಲ. ಬ್ರಿಟಿಷರು ನಮ್ಮ ಸೈನಿಕರನ್ನುಪಯೋಗಿಸಿ ಬರ್ಮಾ, ಮಲಯಾಗಳನ್ನು ಗೆದ್ದಿದ್ದರು. ಅದು ನಮ್ಮ ಸ್ವಂತ ಬುದ್ಧಿಯಿಂದಾದ ಕೆಲಸವಲ್ಲ. ಭಾರತೀಯರು ಮಲಯ, ಇಂಡೋನೇಶ್ಯ, ಇಂಡೋಚೀನಾಗಳಿಗೆ ಹೋದಾಗ ಅಲ್ಲಿಯೇ ನೆಲೆನಿಂತು ಅಲ್ಲಿನ ಜನರೊಡನೆ ಬೆರೆತು ತಮ್ಮ ಹೊಸಮನೆಗಳ ಒಳ್ಳೆಯದಕ್ಕಾಗಿ ದುಡಿದು ಮಡಿದರಲ್ಲದೆ ಅಲ್ಲಿನ ಜನರನ್ನು ಶೋಷಿಸಿ ಇಲ್ಲಿ ಬಂದು ಸುಖಾಸೀನರಾಗಲಿಕ್ಕಲ್ಲ. ಇತರರನ್ನು ಶೋಷಿಸಲಿಕ್ಕೆ ಮನಸ್ಸು ಮಾಡದೆ ನಮ್ಮನ್ನು ಶೋಷಿಸಲಿಕ್ಕೆ ಬಿಡದಿರುವುದೇ ಭಾರತೀಯರ ಉಚ್ಚಆದರ್ಶ. ಭಾರತವು ಸ್ವತಂತ್ರವಾದ ಅಲ್ಪಾವಧಿಯಲ್ಲೇ ಇಂಡೋನೇಶ್ಯಕ್ಕೂ ಸ್ವಾತಂತ್ರ್ಯ ಸಿಕ್ಕುವಂತೆ ಪ್ರಯತ್ನಿಸಿತು. ಜಗತ್ತಿನ ಎಲ್ಲಾ ಜನರು ತಂತಮ್ಮ ಸ್ವತಂತ್ರ ರಾಷ್ಟ್ರಗಳನ್ನು ನಿರ್ಮಿಸಿ ಶಾಂತರೀತಿಯಿಂದ ಅಂತಾರಾಷ್ಟ್ರೀಯ ಸಂಸ್ಥೆಯ ಮೂಲಕ ವಿವಾದಗಳನ್ನು ತೀರ್ಮಾನಿಸಿಕೊಂಡು ಸಕಲರೂ ಸುಖಿಗಳಾಗಿರಬೇಕೆಂದೇ ಭಾರತದ ವಿದೇಶಾಂಗ ನೀತಿ ಸಾರುತ್ತಿದೆ.

ಸ್ವತಂತ್ರವೆಂದು ಗಣಿಸಲ್ಪಡುವ ರಾಷ್ಟ್ರದ ಲಕ್ಷಣಗಳನ್ನು ರಾಷ್ಟ್ರಕವಿ ರವೀಂದ್ರನಾಥ ಠಾಕೂರರು ವಿವರಿಸಿದಷ್ಟು ಚೆಲುವಾಗಿ ಯಾರೂ ಹೇಳಲಾರರು. ಅವರ ಪದ್ಯದ ಕನ್ನಡ ಭಾಷಾಂತರವೊಂದು ಹೀಗಿದೆ:—

ಎಲ್ಲಿ ಮನಕಳುಕಿರದೊ, ಎಲ್ಲಿ ತಲೆ ಬಾಗಿರದೊ,
ಎಲ್ಲಿ ತಿಳಿವಿಗೆ ತೊಡಕು ತೋರದಿಹುದಲ್ಲಿ;
ಎಲ್ಲಿ ಮನೆಯಿಕ್ಕಟ್ಟು, ಸಂಸಾರ ನೆಲೆಗಟ್ಟು
ದೂಳೊಡೆಯದಿಹುದೊ, ತಾನಾ ನಾಡಿನಲ್ಲಿ;
ಎಲ್ಲಿ ಸತ್ಯದಗಾಧನೆಲೆಯಿಂದ ಸವಿವಾತು
ಸಲ್ಲಲಿತನಡೆಯಿಂದ ಮುಂಬರಿವುದಲ್ಲಿ;
ಎಲ್ಲಿ ದಣಿವಿರದ ಸಾಧನೆಯು ಸಫಲತೆ ಕಡೆಗೆ
ತೋಳನೀಡಿಹುದೊ ತಾನಾ ನಾಡಿನಲ್ಲಿ
ಎಲ್ಲಿ ಸುವಿಚಾರಜಲದೊಸರು ನಿರ್ಮಲ ಹರಿದು
ಹಾಳುರೂಢಿಯ ಮರಳೊಳಿಂಗಿ ಕೆಡದಲ್ಲಿ;

ಎಲ್ಲಿ ನೀನೆಮ್ಮ ಚಿಂತನವನುದ್ಯಮವ ಸುವಿ–
ಶಾಲತೆಯ ಪೂರ್ಣತೆಗೆ ಮುನ್ನಡೆಸುವಲ್ಲಿ;
ಅಲ್ಲಿಯಾ ಬಂಧನರಹಿತ ಸುಖದ ಸ್ವರ್ಗದಲಿ
ಪಾಲಿಸೈ ಪಿತ! ನಮ್ಮ ನಾಡೆಚ್ಚರಿಸಲಿ!

ಸ್ವತಂತ್ರದೇಶದ ಪ್ರಜೆಗಳಲ್ಲಿ ವಿಚಾರ ಪ್ರಚಾರಗಳ ಸ್ವಾತಂತ್ರ್ಯವಿದ್ದು ತಮ್ಮದೇ ಅಭಿಪ್ರಾಯ ವ್ಯಕ್ತ ಪಡಿಸಿದರೆ, ಕಷ್ಟವೊದಗೀತೆಂಬ ಅಳುಕಿರಬಾರದು; ತಾನು ದೀನ ದರಿದ್ರನೆಂದು ತಲೆಬಾಗುವಂತಾಗದೆ ಎಲ್ಲರೂ ಸಮಾನರಾಗಬೇಕು; ವಿದ್ಯೆಯು ಸಕಲರಿಗೂ ದೊರೆಯುವಂತಿರಬೇಕು; ಮಾನವಹಿತ, ರಾಷ್ಟ್ರಹಿತಗಳನ್ನು ತಂತಮ್ಮ ಮನೆಯ ಹಿತಕ್ಕಾಗಿ ಮಣ್ಣುಗೂಡಿಸಬಾರದು; ಎಲ್ಲರೂ ಸತ್ಯವಾದಿಗಳಾಗಿರಬೇಕು; ವಿಚಾರಧಾರೆಯು ನಿರ್ಮಲವಾಗಿ ಹರಿಯುತ್ತ ಮುಂದರಿಯಬೇಕಲ್ಲದೆ ಪೂರ್ವ ಸಂಪ್ರದಾಯ ಅಂಧ ವಿಶ್ವಾಸಗಳಲ್ಲಿ ಇಂಗಬಾರದು; ತಾವು ಸಾಧಿಸಿದ್ದೇ ಹೆಚ್ಚೆಂದು ಹೆಮ್ಮೆ ಪಡೆದು ಸುಮ್ಮನಿರದೆ ಇನ್ನೂ ಇನ್ನೂ ಮುನ್ನಡೆಯುತ್ತಿರಬೇಕು; ಬುದ್ಧಿ, ವಿಚಾರ, ಕಾಂಕ್ಷೆಗಳು ಎಲ್ಲವೂ ಹೆಚ್ಚುಹೆಚ್ಚು ವಿಶಾಲವಾಗಿ ಔದಾರ್ಯದಿಂದ ತುಂಬಿರಬೇಕು–ಅಂಥ ನಾಡೇ ಸ್ವತಂತ್ರದೇಶ; ಅಂಥ ಸ್ವಾತಂತ್ರ್ಯದತ್ತ ಜಗತ್ಪಿತನು ನಮ್ಮನ್ನು ನಡೆಸಲಿ!

ಕವಿಯ ಬೋಧನೆಯನ್ನೇ ಶಾಸನದ ಭಾಷೆಯಲ್ಲಿ ಬರೆದಿಟ್ಟಂತೆ ಸ್ವತಂತ್ರ ಭಾರತದ ಸಂವಿಧಾನದ ಪೀಠಿಕೆಯಿದೆ. ಅದನ್ನು ಮನನಮಾಡಿ ಅದರಲ್ಲಿ ಹೇಳಿದ ಪ್ರತಿಯೊಂದು ಅಂಶವೂ ಅಕ್ಷರಶಃ ಪಾಲಿಸಲ್ಪಡುವಂತೆ ಭಾರತೀಯರು ಅಹರ್ನಿಶಿ ಶ್ರಮಿಸಿದರೆ ಪ್ರಜೆ–ಪ್ರತಿನಿಧಿಗಳಿಗೆ, ಮುಂದಾಳು–ಹಿಂದಾಳುಗಳಿಗೆ ತಂತಮ್ಮ ನಡತೆಗೆ ಬೆಲೆಕಟ್ಟಲಿಕೆ ಬೇರೆಯೇ ಒರೆಗಲ್ಲು ಅಗತ್ಯವಿಲ್ಲ.

ನಾರ್ಣಪ್ಪ 'ಕವಿಯ ಮಾತುಗಳನ್ನು ಸ್ವಲ್ಪ ಹಿಂದೆ ಮುಂದೆ ಮಾಡಬಹುದಾದರೆ ಭಾರತದ ಇಂದಿನ ಸ್ಥಿತಿ "ತಿರಿದ ಕೂಳನು ತಾಯಿ ಹಸುಗೆಯಲೆರಡು ಭಾಗವಮಾಡಿ ಮಕ್ಕಳ ಪೊರೆ"ಯುವಂತಿದ್ದರೂ ನಮ್ಮ "ಸಿರಿಯ ಪೇಳ್ವೊಡೆ ಹಸ್ತಿನಾಪುರದರಸುಗಳು," ನಮ್ಮ ಮುಂದಿನ ಕೀರ್ತಿ "ಶಕ್ರ ಸೂರ್ಯರ ತೇಜಕುರಿವಿಗಿಲು" ಎಂದಾಗಲಿ.

ವರ್ಷ ಒಂದರ 300 ಪುಟಗಳಷ್ಟು ಲಲಿತಸಾಹಿತ್ಯ
2 ಅಥವಾ 3 ಪುಸ್ತಕಗಳಲ್ಲಿ

**ವರ್ಷಕ್ಕೆ ಚಂದಾಹಣ — ರೂ. 3/- ಮಾತ್ರ**
(ಅಂಚೆವೆಚ್ಚ ಸಹಿತ)

**ನಮ್ಮ ಬಿಡಿಹೂಗಳನ್ನು ಚಂದಾದಾರರಿಗೆ ಕೇವಲ ಅರ್ಧ ಬೆಲೆಗೆ ಕೊಡಲಾಗುವುದು.**

## ನಮ್ಮ ಪ್ರಕಟಣೆಗಳು:

| | | |
|---|---|---|
| 1. | ಗಾಜಿನ ಬಳೆ ಮತ್ತು ಇತರ ಕಥೆಗಳು ... | 1—6—0 |
| 2. | ಪಳಮೆಗಳು ... ... ... | 0-14—0 |
| 3. | ಪ್ರತಿಜ್ಞೆ ... ... ... | 1—6—0 |
| 4. | ದೇಹಜ್ಯೋತಿಗಳು ಮತು ಪ್ರಾಣಿಪ್ರಬಂಧಗಳು | 1—2—0 |
| 5. | ವೀರ ಬಂಕೆಯ ... ... ... | 1—8—0 |
| 6. | ಇದು ಜೀವನ ... ... ... | 1—6—0 |
| 7. | ಕಾಳಿದಾಸನ ಶಾಕುಂತಲ ನಾಟಕ ವಿಮರ್ಶೆ ... | 1—4—0 |
| 8. | ವಾಙ್ಮಯ ತಪಸ್ಸು ... ... | 0—8—0 |
| 9. | ಭಾಸರನ ಕಥೆಗಳು ... ... | 1—2—0 |
| 10. | ಹರಿಶ್ಚಂದ್ರ ... ... ... | 0-12—0 |
| 11. | ರಾಯಚ್ಚೂರು ವಿಜಯ ... ... | 2—8—0 |
| 12. | ವನಸುಮ ... ... ... | 1—4—0 |
| 13. | ದಶಧೀರರು ... ... ... | 1—6—0 |

ಹೆಚ್ಚಿನ ವಿವರಗಳಿಗೆ:—

ವ್ಯವಸ್ಥಾಪಕರು,

# "ವಸಂತಮಾಲಿಕೆ"

**ಮಂಗಳೂರು-3.**



**Printed at the Udaya Printery & Publications Limited, Mangalore.**